# ಸರ್ವೋದಯ ಸ[illegible]

ಲೇಖಕರು :

ಜಿ. ಆರ್. ಪಾಂಡೇಶ್ವರ

ಸಿ. ಎಸ್. ಕುಲಕರ್ಣಿ

# ಅರ್ಪಣ

ದಿವಂಗತ ಕೌಜಲಗಿ ಹಣಮಂತರಾಯರ

ಪುಣ್ಯಸ್ಮೃತಿಗೆ—

# ನಿವೇದನೆ

ದಿ. ಕೌಜಲಗಿ ಹಣಮಂತರಾಯರ ಸ್ಮಾರಕಸ್ತಂಭವನ್ನು ನಿಲಿಸುವ ಹಂಬಲದಿಂದ ೧೯೫೬ ರಲ್ಲಿ ಅಂದಿನ ಮುಂಬಯಿ ರಾಜ್ಯ ಗ್ರಾಮೋದ್ಯೋಗ ಮಂಡಲದ ಹುಬ್ಬಳ್ಳಿ ಕಚೇರಿಯ ಕಾರ್ಯಕರ್ತರು ಸ್ವಲ್ಪ ಹಣ ಕೂಡಿಸಿದರು. ಹಲವಾರು ತೊಂದರೆಗಳ ಮೂಲಕ ಮಾಡಬಯಸಿದ ಕಾರ್ಯ ಆಗಲಿಲ್ಲ. ಆ ಉದ್ದೇಶಕ್ಕೆ ಚ್ಯುತಿ ಬಾರದಂತೆ, ಕರ್ನಾಟಕದಲ್ಲಿ ಖಾದಿ ಗ್ರಾಮೋದ್ಯೋಗಗಳ ಬೆಳವಣಿಗೆಗೆ ತಳಪಾಯ ಹಾಕಿದ ದಿವಂಗತರ ಪುಣ್ಯ ಸ್ಮೃತಿಗೆ ಈ ಪುಸ್ತಕವನ್ನು ಅರ್ಪಿಸಿ, ಅವರು ಸಲ್ಲಿಸಿದ ಸೇವೆಯನ್ನು ನೆನೆದು, ಆ ಉದ್ದೇಶ ಸಿದ್ಧಿಗಾಗಿ ಶಕ್ತಿ ಮೀರಿ ದುಡಿಯಲು ಬದ್ಧಕಂಕಣರಾಗುವಂತೆ ಮಾಡುವುದೇ ಈ ಪ್ರಕಟನೆಯ ಉದ್ದೇಶವಾಗಿದೆ.

ದಿವಂಗತ ಕೌಜಲಗಿಯವರು ಬರಿಯ ರುಕ್ಷ ರಾಜಕಾರಣಿಗಳಲ್ಲ; ಸಾಹಿತ್ಯ, ರಾಜಕೀಯಗಳೆರಡನ್ನೂ ಸಮನ್ವಯಗೊಳಿಸಿದ ಸವ್ಯಸಾಚಿಗಳವರು. ದೇಶದ ಸ್ವಾತಂತ್ರ್ಯಕ್ಕಾಗಿ ಸತ್ತಾಧಾರಿಗಳ ಲತ್ತಾಪ್ರಹಾರಕ್ಕೆ ತುತ್ತಾಗಲು ಜನತೆಯನ್ನು ಅಣಿಗೊಳಿಸುವ ಎದೆಯ ಜೊತೆಗೆ ನಾಟ್ಯಕೃತಿ ಪ್ರಹಸನಗಳ ಮೂಲಕ ನೊಂದವಗೆ ತಂಪುಣಿಸಲು ನಗೆಯ ತರತರಂಗಗಳನ್ನು ಹುಟ್ಟಿಸುವ ಚತುರ ಕಲಾವಿದನ ಹೃದಯವೂ ಇದ್ದಿತು. ವಿಜಾಪುರದ ಭೀಕರ ಬರಗಾಲದಿಂದ ಮರುಕಗೊಂಡ ಇವರ ಕವಿ ಹೃದಯ ಕನಸು ಕಾಣುತ್ತ ಕೂಡ್ರಲಿಲ್ಲ. ನೊಂದವರ ಕಂಬನಿ ಒರಸುವವರೆಗೂ ಬರಗಾಲ ಪೀಡಿತರಿಗೆ ಸಕ್ರಿಯ ನೆರವನ್ನು ದೊರಕಿಸುವುದಕ್ಕಾಗಿ ಅಹರ್ನಿಶಿ ದುಡಿದರು.

ಸರ್ವೋದಯದ ಅರ್ಥಶಾಸ್ತ್ರ ಮಾನವತೆಯ ಅರ್ಥಶಾಸ್ತ್ರವಾಗಿದೆ. ಕೇಂದ್ರೀಕೃತ ಅರ್ಥ ವ್ಯವಸ್ಥೆಯಲ್ಲಿ ಶೋಷಣೆಯಿದೆ; ಅರ್ಥಾತ್ ಹಿಂಸೆಯಿದೆ. ಈ ಅರ್ಥಶಾಸ್ತ್ರದಲ್ಲಿ ಖಾದಿ-ಗ್ರಾಮೋದ್ಯೋಗಗಳಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಖಾದಿ-ಗ್ರಾಮೋದ್ಯೋಗದಲ್ಲಿ ತೊಡಗಿದ ಜನ ಈ ಪುಸ್ತಕದ ಪ್ರಕಟಣೆಗೆ ಕಾರಣವಾಗಿದ್ದಾರೆ. ಆ ಕಾರ್ಯಕರ್ತರು ಸರ್ವೋದಯ ಸಮಾಜ ರಚನೆಯ ತಾತ್ವಿಕ ಹಿನ್ನೆಲೆಯನ್ನು ಅರಿತುಕೊಳ್ಳಲು ಈ " ಸರ್ವೋದಯ ಸಮಾಜ " ನೆರವು ನೀಡುವದೆಂದು ನಂಬಿದ್ದೇನೆ.

ಈ ಅಭ್ಯಾಸ ಪೂರ್ಣವಾದ ಗ್ರಂಥವನ್ನು ಶ್ರೀ. ಜಿ. ಆರ್. ಪಾಂಡೇಶ್ವರ ಮತ್ತು ಪ್ರೊ. ಸಿ. ಎಸ್. ಕುಲಕರ್ಣಿ ಅವರು ವಿಶೇಷ ಪರಿಶ್ರಮವಹಿಸಿ ಬರೆದು ಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆಗಳು.

೩೧—೩—೧೯೬೦

ವಿ. ಜಿ. ಭಟ್ಟ

ಪೀಠಿಕೆ :

## "ಸರ್ವೋದಯ"ದ ವ್ಯಾಖ್ಯೆ

ಉದಯವೆಂದರೆ ಬೆಳಕು. ಬೆಳಕು ಜ್ಞಾನದ ಸಂಕೇತವಾಗಿರುವಂತೆ ಕತ್ತಲೆಯು ಅಜ್ಞಾನದ ಚಿಹ್ನೆಯಾಗಿದೆ. ಅಜ್ಞಾನವು ದುಃಖಕ್ಕೆ ಮೂಲ; ದುಃಖವು ನಿರುತ್ಸಾಹಕ್ಕೆ ಮೂಲ; ನಿರುತ್ಸಾಹವು ಸೋಮಾರಿತನಕ್ಕೆ ಮೂಲ; ಸೋಮಾರಿತನವು ಬಡತನಕ್ಕೆ ಮೂಲ; ಬಡತನವು ನಾಶಕ್ಕೆ ಮೂಲ. ಈ ನಾಶದ ಹಾದಿಯಲ್ಲಿ ಧಾವಿಸುತ್ತಿದ್ದ ಹಿಂದುಸ್ಥಾನವನ್ನು ಗಾಂಧಿಯವರು ಎಚ್ಚರಿಸಿ, ಜೀವದ ದಾರಿ ಹಿಡಿಸಿದರು. ಅದೇ ಸರ್ವೋದಯ. ಆ ಸರ್ವೋದಯದ ಬೆಳಕಿನಲ್ಲಿ ಜೀವಿಸುವ ವ್ಯಕ್ತಿಗಳ ಸಮುದಾಯ ಜಾತಿಗಳ ಕೂಟ, ಧರ್ಮದ ಚಕ್ರಗಳೇ "ಸರ್ವೋದಯ ಸಮಾಜ."

ಸರ್ವ-ಉದಯ ಎಂದರೆ ಎಲ್ಲವುಗಳ ಬೆಳಗು ಅಥವಾ ಎಚ್ಚರ. ಇದರಲ್ಲಿ ೧] ಸರ್ವ ಸಮಾಜಗಳ ಉದಯ ಮತ್ತು ೨] ಸಮಾಜದ ಸರ್ವ ವಿಭಾಗಗಳ ಉದಯಗಳು ಅಡಕವಾಗುವವು. ಈ ಎರಡೂ ಉದ್ದೇಶಗಳನ್ನು ಸಾಧಿಸುವ ಸಾಧಕರ ಬಳಗಕ್ಕೆ 'ಸರ್ವೋದಯ ಸಮಾಜ' ಎಂದು ಮಹಾತ್ಮಾ ಗಾಂಧಿಯವರು ಹೆಸರಿಟ್ಟರು. ಹಿಂದೂ, ಮುಸ್ಲಿಂ, ಕ್ರೈಸ್ತ, ಶೀಖ, ಪಾರ್ಸಿ, ಬೌದ್ಧ— ಎಂಬ ಎಲ್ಲ ಧರ್ಮದವರೂ, ಆಯಾ ಧರ್ಮದೊಳಗಿನ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಶಿಯ್ಯಾ-ಸುನ್ನಿ, ಕ್ಯಾಥಲಿಕ್, ಪ್ರಾಟೆಸ್ಟಂಟ್, ಮೊದಲಾದ ವಿವಿಧ ಸಮಾಜಗಳವರೂ ಈ 'ಸರ್ವೋದಯ ಸಮಾಜ'ಕ್ಕೆ ಸೇರುತ್ತಲೇ ತಮ್ಮ ತಮ್ಮ ವಿಶಿಷ್ಟ ಸಮಾಜಗಳ ಕಟ್ಟು ಕಟ್ಟಳೆಗಳನ್ನೆಲ್ಲ ಮರೆತು ಈ ಸಮಾಜದ ಕಟ್ಟು ಕಟ್ಟಳೆಗಳಿಗೆ ಕಾಯಾ, ವಾಚಾ, ಮನಸಾ ಹೊಂದಿಕೊಂಡು ನಡೆಯಬೇಕು. ಹಾಗೆ ನಡೆದಲ್ಲಿ ಮಾತ್ರವೇ ಈ ಹೊಸ ಸಮಾಜವು ಉಳಿಯುವುದು. ಇದರ ಸದಸ್ಯರಲ್ಲಿ ಜಾತಿ ಮತಗಳ ತಾರತಮ್ಯವಿಲ್ಲ; ಮೇಲು ಕೀಳೆಂಬ ಭಾವವಿಲ್ಲ. ಎಲ್ಲರೂ ಪರಸ್ಪರ ಸಮಾನಸ್ಕಂಧರಾಗಿ ಸದ್ವ್ಯವಹಾರವುಳ್ಳವರಾಗಿರುವರು. ಈ ಸಮಾಜವು ಗಾಂಧೀಜಿಯವರಿಂದ ಜಾತವಾದುದರಿಂದ ಇದಕ್ಕೆ 'ಗಾಂಧೀಜಾತಿ'

ಎಂದು ನಮ್ಮ ದೇಶಕ್ಕೆ ರೂಢವಾಗಿರುವ 'ಜಾತಿ' ಸೂಚಕ ಶಬ್ದದ ನಾಮಕರಣ ಮಾಡಬಹುದು. ಈ ಜಾತಿಯಿಂದಲೇ ಗಾಂಧೀ ಸ್ಮಾರಕ ಉಳಿಯಬೇಕು; ಇದೇ ಗಾಂಧೀಜಿಯವರ ಬಗ್ಗೆ ಎಂದೆಂದೂ ಅಳಿಯದ ಸ್ಮಾರಕವಾಗುವುದು.

## ಸರ್ವ ಸಮಾಜೋದಯ

ಎಲ್ಲ ಸಮಾಜಗಳ ಉದಯವೆಂದೆನೆಷ್ಟೆ ೧) ಹಿಂದುಳಿದ ಸಮಾಜಗಳು ತಾವೇಕೆ ಹಿಂದುಳಿದೆವೆಂದು ವಿಚಾರಿಸಲು ಎಚ್ಚರಗೊಂಡವು; ಮತ್ತು ಮುಂದೆ ಬರುವ ಮಾರ್ಗ ಹುಡುಕ ತೊಡಗಿದವು ೨) ಮುಂದರಿದ ಸಮಾಜಗಳು, ಇತರ ಸಮಾಜಗಳು ಏಕೆ ಹಿಂದುಳಿದವೆಂಬುದನ್ನು ವಿಚಾರಿಸ ತೊಡಗಿದುವು; ಮತ್ತು ಅವುಗಳನ್ನು ಮುಂದೆ ತರಲು ಮಾರ್ಗ ಹುಡುಕ ತೊಡಗಿದುವು. ತಮಗೂ ಹಿಂದುಳಿದ ಸಮಾಜಗಳಿಗೂ ಇರುವ ಅಂತರವನ್ನು ಕಿರಿದು ಮಾಡಿಕೊಳ್ಳುವಂತೆ, ತಮ್ಮ ಲೋಪ ದೋಷಗಳನ್ನು ಪಶ್ಚಾತ್ತಾಪ ಬುದ್ಧಿಯಿಂದ ತಿದ್ದಿಕೊಳ್ಳತೊಡಗಿದವು. ೩) ಗುಡ್ಡಗಾಡು ಜನರೆಂಬ ಮೂಲ ನಿವಾಸಿಗಳ ಸಮಾಜಗಳು ನಾಗರಿಕ ಸಮಾಜಗಳನ್ನು ಕಣ್ಣಿಟ್ಟು ನೋಡ ತೊಡಗಿದುವು; ಆಧುನಿಕ ವಿಜ್ಞಾನ ಮತ್ತು ರಾಜ್ಯಕಾರಣದಲ್ಲಿ ತಾವೂ ತಮ್ಮ ಭಾಗವನ್ನು ಪಡೆಯಬೇಕೆಂದು ಎಚ್ಚರವಾದುವು; ಮತ್ತು ನಾಗರಿಕರಾಗುವ ಮಾರ್ಗಗಳನ್ನು ಹುಡುಕ ತೊಡಗಿದವು ತಮ್ಮ ಅನಾಗರಿಕ ರೂಢಿ ರೀತಿಗಳನ್ನು ಬಿಟ್ಟು ಬಿಡಲು ನಿರ್ಧರಿಸಿದುವು. ೪) ಸ್ಪೃಶ್ಯರು ಮತ್ತು ಅಸ್ಪೃಶ್ಯರು ಎಂಬ ವಿವಿಧ ಸಮಾಜಗಳು ಎಚ್ಚರವಾದುವು ಮಾನವ ಸಮಾಜದಲ್ಲಿ ಹುಟ್ಟಿನಿಂದಲೇ ಮೇಲು ಕೀಳು, ಸ್ಪೃಶ್ಯ–ಅಸ್ಪೃಶ್ಯವೆಂಬ ಭೇದವಿರುವುದು ಒಂದು ದೊಡ್ಡ ಕಲಂಕವೆಂದು ತಿಳಿಯತೊಡಗಿದುವು. ಸ್ಪೃಶ್ಯರೆಂಬವರಲ್ಲಿರುವ ಉಚ್ಚ ಗುಣಾದರ್ಶಗಳು ತಮ್ಮಲ್ಲಿಯೂ ಇವೆ, ತಮಗೂ ಸ್ವಯಂದತ್ತವಾದ ಕರ್ತವ್ಯಾಧಿಕಾರಗಳಿವೆ ...ಎಂದು ಅಸ್ಪೃಶ್ಯರು ಅರಿತುಕೊಂಡರು; ಅದೇ ಮೇರೆಗೆ, ಸ್ಪೃಶ್ಯರೆಂಬ ಚಾತುರ್ವರ್ಣೀಯರು ತಮ್ಮಲ್ಲಿಯೂ ಅಸ್ಪೃಶ್ಯರಲ್ಲಿರಬಹುದಾದ ದುರ್ಗುಣ, ದುರಾಚಾರಗಳಿರುತ್ತವೆ, ತಮ್ಮ ಕರ್ತವ್ಯಾಧಿಕಾರಗಳು ದೈವದತ್ತವಾದುವಲ್ಲ ಎಂಬ ವಿವೇಕವುಳ್ಳವರಾದರು.

## ಸ್ತ್ರೀ ಸಮಾನತೆ

ಎಲ್ಲ ಸಮಾಜಗಳೂ ಎಚ್ಚರಗೊಂಡಮೇಲೆ, ಆ ಎಲ್ಲ ಸಮಾಜಗಳ ಹೆಂಗಸರೂ ಜಾಗ್ರತರಾದರೆಂದು ಬೇರೆ ಹೇಳಬೇಕಾಗಿಲ್ಲ. ಸ್ತ್ರೀಯರ ಜಾಗ್ರತಿ ಎಂದರೆ, ಹಲವು ಹಳೆಯ ರೂಢಿಗಳ ವಿರುದ್ಧವಾಗಿ ಅವರು ಧೈರ್ಯದಿಂದ ಪುರುಷರೊಡನೆ ಸಮಾನತೆ ಕೇಳುವುದು. ಇದರಲ್ಲಿ (೧) ಪ್ರೌಢ ವಿವಾಹ (೨) ವಿಧವಾ ವಿವಾಹ (೩) ಏಕಪತ್ನಿತ್ವ (೪) ಪ್ರೇಮವಿದ್ದಲ್ಲಿ ಮದುವೆಯಾಗುವದೆಂಬ ಅಂತರ್ಜಾತಿ ವಿವಾಹಗಳು (೫) ಹುಡುಗರಿಗಿರುವಂತೆ ಹುಡುಗಿಯರಿಗೂ ವಾರಸಾ ಹಕ್ಕು ಮೊದಲಾದವು ಅಡಕವಾಗುವವು.

## ವಿವಿಧ ವೃತ್ತಿಗಳ ಎಚ್ಚರಿಕೆ

ಈ ಎಲ್ಲ ವರ್ಗಗಳಂತೆ, ಎಲ್ಲ ವಿಧದ ವೃತ್ತಿ [ಕಸಬು] ಯವರೂ ಎಚ್ಚರಾದರು. "ಕಾಯಕವೇ ಕೈಲಾಸ" "ಕೋಟಿ ವಿದ್ಯೆಕ್ಕಿಂತ ಮೇಟಿ ವಿದ್ಯೆವೇ ಲೇಸು" ಎಂಬ ಜ್ಞಾನೋದಯವಾಯಿತು. "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂದರೆ, ಎಲ್ಲ ಧರ್ಮ ಕಾರ್ಯಗಳಿಗೂ ಶರೀರಾರೋಗ್ಯವೇ ಮೂಲವೆಂಬ ಪ್ರಾಚೀನ ಸತ್ಯವನ್ನು ಪುನಃ ಕಾಣತೊಡಗಿದರು. "Eat well and play foot ball, you will understand Gita better" (ಒಳ್ಳೆಯ ಆಹಾರ ಉಂಡು, ವ್ಯಾಯಾಮ ಮಾಡು! ಭಗವದ್ ಗೀತೆಯನ್ನು ಇನ್ನಿಷ್ಟು ಚೆನ್ನಾಗಿ ತಿಳಿಯುವೆ) ಎಂಬುದಾಗಿ ಸ್ವಾಮಿ ವಿವೇಕಾನಂದರು ಸಾರಿರುವುದನ್ನು ಸ್ಮರಿಸಿಕೊಳ್ಳಬೇಕು. ಎಂತಹ ಜ್ಞಾನ–ವಿಜ್ಞಾನ ವಿಶಾರದನಾದರೂ ದಿನಂಪ್ರತಿ ಏನಾದರೊಂದು ಬಗೆಯ ಶರೀರ ಶ್ರಮದ ಕಾರ್ಯ ಮಾಡಬೇಕೆಂದು ಮಹಾತ್ಮರು ಉಪದೇಶಿಸಿದರು. ಕಾಯಕ ಮಾಡದೇ ತಿಂಬವನು ಕಳ್ಳನೆಂದೂ, ಪರಶೋಷಕನೆಂದೂ, ಅವರು ನಿರ್ಭಿಡೆಯಿಂದ ಸಾರಿ, ಧನಮದ, ವಿದ್ಯಾಮದದಿಂದ ಕೊಬ್ಬಿದವರನ್ನು ಮೆತ್ತಗೆ ಮಾಡಿದರು. ಕಾಯಕವೇ ಸಂಪತ್ತಿನ ಮೂಲವಾದುದರಿಂದ, ಕಾಯಕ ಮಾಡುವವರೇ ಸಂಪತ್ತಿನ ಒಡೆಯರು ಎಂದು ಅವರು ಪಾಶ್ಚಿಮಾತ್ಯ ಮಾರ್ಕ್ಸನ ತತ್ವವನ್ನು ನಮ್ಮ ದೇಶದ ಕರ್ಮಯೋಗದ ಪರಿಭಾಷೆ

ಯಲ್ಲಿ ಎರಕ ಹೊಯ್ದರು. ಇದರ ಪರಿಣಾಮವಾಗಿ ಅವರ ವಿಧಾಯಕ ಕಾರ್ಯಕ್ರಮ(Constructive programme) ವು ರೂಪುಗೊಂಡಿತು.

ಒಕ್ಕಲಿಗರು, ಕಮ್ಮಾರರು, ಬಡಗಿಗಳು, ನೇಕಾರರು, ಕುಂಬಾರರು, ಗೌಂಡಿಗಳು, ಜೇಡರು, ಚರ್ಮಕಾರರು ಮೊದಲಾದ ಕಸಬಿನ 'ಕಾಯಕ' ದವರೆಲ್ಲ ಎಚ್ಚೆತ್ತರು. ಬುದ್ಧಿ ಜೀವಿಗಳಿಗಿರುವಷ್ಟೇ ಸ್ವಾಭಿಮಾನ, ಸ್ವದೇಶಾಭಿಮಾನಗಳು ತಮಗೂ ಉಂಟೆಂದು ಅವರು ಧೈರ್ಯ ತಾಳಿದರು. ಜನಾಂಗದ ಭೌತಿಕ ಜೀವನಕ್ಕೆ ತಾವೇ ಆಧಾರ ಸ್ತಂಭರೆಂದು ಅವರು ತಿಳಿದುಕೊಳ್ಳತೊಡಗಿದರು. ರಾಷ್ಟ್ರದ ರಾಜ್ಯಕಾರಣ ಮತ್ತು ಸರಕಾರದ ರಚನೆಯಲ್ಲಿ ತಮ್ಮ ಹಕ್ಕು ಬಾಧ್ಯತೆಗಳಿಗೇ ಹೆಚ್ಚು ಮಹತ್ವ ಕೊಡಲ್ಪಡಬೇಕೆಂದೂ, ತಮ್ಮ ಒಲವು ನಿಲುವುಗಳಿಗನುಗುಣವಾಗಿ ರಚಿತವಾಗದ ಸರಕಾರವು ನಿಜವಾದ ಪ್ರಜಾಸತ್ತೆಯ ಸರಕಾರವಾಗಲಾರದೆಂದೂ ಅವರು ಹಟ ಹಿಡಿಯತೊಡಗಿದರು.

## ಸ್ವಾವಲಂಬನ, ಸ್ವದೇಶಿ

ಹೀಗೆ ಸರ್ವ ಸಮಾಜಗಳೂ, ಸರ್ವ ವೃತ್ತಿಯವರೂ ಎಚ್ಚೆತ್ತಂತೆ, ಸಮಾಜದ ಸರ್ವ ವಿಭಾಗಗಳಲ್ಲಿಯೂ ಎಚ್ಚರಿಕೆ ಉಂಟಾಯಿತು. ಆದರ ಫಲವಾಗಿ,

೧) ಆರ್ಥಿಕ ಸ್ವಾವಲಂಬನ, ತದಂತರ್ಗತವಾಗಿ,
೨) ಆಹಾರ ಸ್ವಾವಲಂಬನ
೩) ವಸ್ತ್ರ ಸ್ವಾವಲಂಬನ
೪) ಜ್ಞಾನ ಸ್ವಾವಲಂಬನ

ಎಂಬೀ ಚತುರ್ವಿಧ ಸ್ವಾವಲಂಬನಗಳು ತಲೆದೋರಿದವು. ಈ ಸ್ವಾಲಂಬನದಿಂದ ೧) ಪ್ರಾಂತೀಯತೆ ೨) ರಾಷ್ಟ್ರೀಯತೆಗಳು ಕಲ್ಪಿತವಾದುವು. ಪ್ರತಿಯೊಂದು ಪ್ರಾಂತ್ಯವೂ, ಪ್ರದೇಶವೂ ತನ್ನ ಆಹಾರ ಪೂರೈಕೆ, ವಸ್ತ್ರ ಪೂರೈಕೆ, ಭಂಡವಲ ಪೂರೈಕೆ, ಮತ್ತು ಶಿಕ್ಷಣ ಪೂರೈಕೆಗಳನ್ನು ಪರರ ನೆರವಿಲ್ಲದೆ ತಾನೇ ಪೂರೈಸಿಕೊಳ್ಳತಕ್ಕದ್ದೆಂಬ ವ್ರತನಿಯಮವು ಹುಟ್ಟಿತು.

ಅದೇ ಪ್ರಕಾರ ಹಿಂದುಸ್ತಾನದ ಬೇಡಿಕೆಗಳೆಲ್ಲ ಹಿಂದುಸ್ತಾನದಲ್ಲಿಯೇ, ಹಿಂದುಸ್ತಾನದಿಂದಲೇ ಪೂರೈಸಲ್ಪಡತಕ್ಕವೆಂಬ "ಸ್ವದೇಶೀ ವ್ರತವು" ಜನ್ಮತಾಳಿತು. ಪ್ರತಿಯೊಂದು ಪ್ರಾಂತ್ಯವೂ, ಪ್ರದೇಶವೂ ವಿಪುಲವಾದ ಪ್ರಾಕೃತಿಕ ಸಂಪತ್ತುಳ್ಳದ್ದಾಗಿದೆ; ಜನಬಲ, ಧನಬಲವುಳ್ಳದ್ದಾಗಿದೆ; ಕುಶಲ ಕಲಾ ಕೈಗಾರಿಕೆಗಳ ಪರಂಪರೆಯುಳ್ಳದ್ದಾಗಿದೆ; ಹಾಗೆಯೇ ಮಾತೃಭಾಷಾ ದ್ವಾರ ಸರ್ವ ಶಿಕ್ಷಣವನ್ನೂ ಪಡೆಯಲನುಕೂಲವಾದ ಇತಿಹಾಸ ಮತ್ತು ಭಾಷಾ ಸಂಸ್ಕೃತಿಗಳುಳ್ಳದ್ದಾಗಿದೆ ಎಂಬ ಅರಿವು ಹೆಚ್ಚಿತು.

## ದಾಸ್ಯದ ತಡೆ

ಈ ಸ್ವದೇಶೀ ವ್ರತವು ನಿರಾತಂಕವಾಗಿ ಆಚರಿಸಲ್ಪಡುವಂತೆ, ಪರದಾಸ್ಯ (ಗುಲಾಮಗಿರಿ) ವೆಂಬ ತಡೆಯು ಇರಬಾರದೆಂಬ ಜ್ಞಾನ ಉಂಟಾಯಿತು. ಮಹಾತ್ಮರ ನಿರಂತರ ಪರಿಶ್ರಮದ ಫಲವಾಗಿ ಪರದಾಸ್ಯವನ್ನು ಕಿತ್ತೊಗೆಯುವ ಬಗ್ಗೆ ದೇಶದ ಉದ್ದಗಲಕ್ಕೂ ಸ್ವರಾಜ್ಯಾಭಿಲಾಷೆಯು ಹಬ್ಬಿತು! ಅದರ ಕಾಯಕವಾಗಿ ಪ್ರತ್ಯಕ್ಷಾಪ್ರತ್ಯಕ್ಷ ಚಳವಳಿಗಳು ಹೂಡಲ್ಪಟ್ಟವು. ಸರ್ವೋದಯದಲ್ಲಿ ನಂಬಿಗೆಯುಳ್ಳವರೆಲ್ಲರೂ ಈ ಕಾಯಕವನ್ನು ಕೈಕೊಂಡರು; ೧) ಸವಿನಯ ಕಾಯದೆ ಭಂಗ ೨) ಸತ್ಯಾಗ್ರಹಗಳೇ ಕಾಯಕದ ಎರಡು ತೋಳುಗಳಾದವು. ವಿನಯದಿಂದಲೇ ಕಾಯದೆಯನ್ನು ಉಲ್ಲಂಘಿಸುವದು, ವಿನಯದಿಂದಲೇ ಹಳೆಯ ರೂಢಿ-ಸಂಪ್ರದಾಯಗಳನ್ನು ಮೀರುವುದು, ಅರ್ಥಾತ್, ಪ್ರೀತಿಯಿಂದ ದ್ವೇಷವನ್ನೂ, ಅಹಿಂಸೆಯಿಂದ ಬಲಾತ್ಕಾರವನ್ನೂ ಇದಿರಿಸುವುದು—ಇವೇ ಮಹಾತ್ಮರು ಕಟ್ಟಿದ ಸರ್ವೋದಯ ಸಮಾಜದ ಜೀವಜ್ಯೋತಿ.

## ವಿನಯ-ಅಹಿಂಸೆ

ಆ ಜೀವಾಳವಿಲ್ಲದ ಸರ್ವೋದಯವು ಗ್ಯಾಸ್ ದೀಪದ ಉದಯವೇ ಸರಿ; ಆ ಸಮಾಜವು ನೈಸರ್ಗಿಕ ಪರಿಮಳವಿಲ್ಲದ ಕಾಗದದ ಹೂವೇ ಸರಿ. ವಿನಯವೆಂದರೆ ನಿರಹಂಕಾರಭಾವ. ನಿರಹಂಕಾರವು ನಿರಭಿಮಾನವಲ್ಲ. ನಿರಹಂಕಾರಕ್ಕೂ ನಿರಭಿಮಾನಕ್ಕೂ ವ್ಯತ್ಯಾಸವಿದೆ ಎಂಬುದನ್ನು ಮರೆಯ

ಬಾರದು. ಅಭಿಮಾನವಿಲ್ಲದೇ ಹೋದರೆ "ಸ್ವ" (ನನ್ನ ಧರ್ಮ, ನನ್ನ ಜನ, ನನ್ನ ದೇಶ) ಎಂಬುದು ಹುಟ್ಟಲಾರದು. ನಿರಭಿಮಾನವು ನಿಷ್ಕ್ರಿಯತೆಗೂ ಕಾರಣವಾಗುವುದು. ಆದ್ದರಿಂದ ನಿಜವಾದ ವಿನಯದಲ್ಲಿ ಸ್ವ-ಅಭಿಮಾನವು ಅರಳಿದ ಹೂವಿನೊಳಗಿನ ಮನೋಜ್ಞವಾದ ಮಕರಂದದಂತೆ ಇರುವುದೇ ಆ ಹೂವಿನ ನೈಸರ್ಗಿಕ (ಪ್ರಕೃತಿ) ತೆಯ ಚಿಹ್ನೆಯಾಗಿದೆ.

## ಒಳ ಹೊರಗಿನ ಸ್ವಚ್ಛತೆ

ಬೆಳಕಿದ್ದಲ್ಲಿ ಕತ್ತಲೆ ಇಲ್ಲ. ಸ್ವಚ್ಛತೆ ಇದ್ದಲ್ಲಿ ರೋಗವಿಲ್ಲ. ಅದೇ ಮೇರೆಗೆ, ಪ್ರೇಮವಿದ್ದಲ್ಲಿ ಭಯವಿಲ್ಲ. ವಿನಯವಿದ್ದಲ್ಲಿ ಅಹಂಭಾವವಿಲ್ಲ. ಜ್ಞಾನವಿದ್ದಲ್ಲಿ ಅಸೂಯೆ ಇಲ್ಲ, ದ್ವೇಷವಿಲ್ಲ. ಈ ಸತ್ಯ ಸೂತ್ರಗಳನ್ನು ಆಚರಿಸುತ್ತ ನಡೆಯುವವರೇ ಸರ್ವೋದಯ ಸಮಾಜ ರಚಿಸಬಲ್ಲರು. ಮಿಂಚು ಮಿಂಚಿದಂತೆ ಕ್ಷಣಕಾಲ ಮಾತ್ರವೇ ವಿವೇಕೋದಯವಾದರೆ ಸಾಲದು ಜೀವನದ ಪ್ರತಿ ನಿಮಿಷದಲ್ಲಿಯೂ ಈ ಮಿಂಚಿನ ಬೆಳಕಿನಲ್ಲಿ ನಡೆಯುತ್ತಿರಬೇಕು. ಇದೊಂದು ಕತ್ತಿಬಾಯಿ ಮೇಲೆ ನಡೆಯುವಷ್ಟು ಕಠಿಣ ಕೆಲಸ ಇದೊಂದು ಮುಖ್ಯ ಅರ್ಹತೆಯಾಗಿದೆ ಅದಕ್ಕೆ ವ್ಯಕ್ತಿತ್ವದ ವಿಸರ್ಜನೆಯೇ ತಳಹದಿ. ಏಕಾತ್ಮವು ವಿಶ್ವಾತ್ಮವಾಗುವುದೇ ವ್ಯಕ್ತಿತ್ವದ ವಿಸರ್ಜನೆಯಾಗುವುದು. ಎಲ್ಲರ ಸುಖ ನನ್ನ ಸುಖ, ಎಲ್ಲರ ಕೀರ್ತಿ ನನ್ನ ಕೀರ್ತಿ, ಎಲ್ಲರ ಅಧಿಕಾರ ನನ್ನ ಅಧಿಕಾರ–ಎಂಬ ವಿಶಾಲ ವ್ಯಕ್ತಿತ್ವವನ್ನು ವೃದ್ಧಿಗೊಳಿಸಬೇಕು. ನಾನು, ನನ್ನದು ಎಂಬುದನ್ನು ಅವರು, ಅವರದು ಎಂದು ರೂಪಾಂತರಿಸಬೇಕು. ಅದೇ ಆತ್ಮಯಜ್ಞ, ಅದೇ ಅಮೃತತ್ವ: ಅದೇ ಅವ್ಯಕ್ತತ್ವ. ಅದಕ್ಕೆ ಎಂದಿಗೂ ನಾವಿಲ್ಲ. ಆತ್ಮನ ಅಮರತ್ವವನ್ನು ಸಾರಿದ ಪ್ರಾಚೀನ ಧೀರರ ಸನಾತನ ಧರ್ಮವೇ ಅದು. ಆ ಧರ್ಮವಿಂದು (೧) ಸ್ವಾರ್ಥಿಗಳ, (೨) ದುರಹಂಕಾರಿಗಳ, (೩) ಲೌಕಿಕ ಸುಖ ಸಂಪದಧಿಕಾರಗಳ ಉಪಾಸಕರಿಂದ ಯಾತನೆ ಹೊಂದುತ್ತಿದೆ. ಸನಾತನವು ನಿತ್ಯವಾದದ್ದು; ನಿರಾಪದವಾದದ್ದು ಆ ಧರ್ಮದ ಸೋಗಿನಿಂದ, ಕೇವಲ ಲೌಕಿಕರಾಗಿ ಮೆರೆಯುವವರ ದುಷ್ಕಾಮನೆಯಿಂದ ಹಿಂದೂ ಸಮಾಜವು ಅಧೋಗತಿಗೆ ಹೋಗಿದೆ. ಮಹಾತ್ಮರು ಈ ಅಧೋಮುಖ ಜಾರಿಕೆ

(Downward drift) ಗೆ ತಡೆ (brake) ಹಾಕಿ ನಿಲ್ಲಿಸಿದನು. ಸೋಗನ್ನು ಬಿಟ್ಟು ಕೊಟ್ಟು, ಪ್ರಾಚೀನ ಸತ್ಯ ಧರ್ಮದ ಉಪಾಸನೆಯನ್ನು ಪುನಃ ಪ್ರಾರಂಭಿಸಿರೆಂದು ಎಚ್ಚರಿಸಿದರು. ಆ ಎಚ್ಚರಿಕೆಯನ್ನು ಉಪೇಕ್ಷಿಸಿದಲ್ಲಿ, ನಾಶವು ಅನಿವಾರ್ಯವಾಗುವುದು.

ಚಿನ್ನ-ಬೆಳ್ಳಿಗಳು ನನ್ನಲ್ಲಿಲ್ಲ; ನಾನೇ ಬೆಳಕು, ನಾನೇ ಜ್ಞಾನ ಎಂಬ ಯೇಸುಕ್ರಿಸ್ತನ ವಾಣಿಯನ್ನು ಗಾಂಧಿಯವರು ಸಾರಿದರು: ಅವರ ಶಿಷ್ಯರು, ಶಿಷ್ಯಾನುಶಿಷ್ಯರು ಚಿನ್ನ-ಬೆಳ್ಳಿಯ ರಾಶಿಯೊಟ್ಟಿಕೊಂಡು ಎಲ್ಲರ ಮೇಲೂ ಎಲ್ಲದರ ಮೇಲೂ ಅಧಿಕಾರ ನಡೆಸುವ ರಾಕ್ಷಸೀ ಆಕಾಂಕ್ಷೆಯುಳ್ಳವರಾಗ ಬಾರದು.

ಯಸ್ಯಾಸ್ತಿವಿತ್ತಂ ಸನರಃ ಕುಲೀನಃ
ಸಪಂಡಿತಃ ಸಶ್ರುತವಾನ್ ಬಹುಜ್ಞಃ

(ಯಾವನ ಹತ್ತಿರ ಆಸ್ತಿ-ದ್ರವ್ಯಗಳಿರುತ್ತವೋ ಅವನೇ ಪಂಡಿತ, ಅವನೇ ತತ್ವವಿದ, ಅವನೇ ಸರ್ವಜ್ಞ) ಎಂಬ ಸಿದ್ಧಾಂತಕ್ಕೆ ಗಾಂಧಿ ಶಿಷ್ಯರಾರೂ ತಲೆಬಾಗಕೂಡದು. ಜ್ಞಾನ, ಗುಣ, ಕ್ರಿಯೆಗಳು ಎಲ್ಲಿದ್ದರೂ ಯಾರಲ್ಲಿದ್ದರೂ ಗೌರವಾರ್ಹಗಳೇ ಎಂದು ತಿಳಿಯಬೇಕು. ಅದಕ್ಕಿಂತ ದೊಡ್ಡ ಗಾಂಧೀ ಸ್ಮಾರಕವಿಲ್ಲ. ಅದರ ಪ್ರತ್ಯಕ್ಷ ರೂಪವೇ 'ಸರ್ವೋದಯ ಸಮಾಜ'.

# " ಸರ್ವೋದಯ " ಪ್ರವರ್ತನೆ

ಮಹಾತ್ಮಾ ಗಾಂಧಿಯವರ ನಿರ್ಯಾಣಾನಂತರ ೧೯೪೮ ನೇ ಮಾರ್ಚ ತಿಂಗಳಲ್ಲಿ ಮಹಾತ್ಮರ ನಿಕಟಾನುವರ್ತಿಗಳಾಗಿದ್ದ ವಿಧಾಯಕ ಕಾರ್ಯಕರ್ತರ ಒಂದು ಸಮ್ಮೇಳನವು ವಾರ್ಧಾದ 'ಸೇವಾ ಗ್ರಾಮ' ದಲ್ಲಿ ಸೇರಿತು. " ಸರ್ವೋದಯ ಸಮಾಜ'' ಎಂಬ ಹೆಸರಿನ ಒಂದು ಜಾಗತಿಕ ಸಂಘವನ್ನು ಸಂಸ್ಥಾಪಿಸಲು ಈ ಸಮ್ಮೇಳನವು ನಿರ್ಧರಿಸಿತು. ಈ ಸಂಘದ ಸದಸ್ಯತ್ವವು ಯಾವುದೊಂದೇ ದೇಶ, ಜನಾಂಗ ಅಥವಾ ಧರ್ಮದ ಜನರಿಗಷ್ಟೇ ಪರಿಮಿತ ವಾಗಿರದೆ, ಸಂಘದ ಧ್ಯೇಯ-ಧೋರಣೆ ಮತ್ತು ವಿಧಾಯಕ ಕಾರ್ಯ ಪದ್ಧತಿ ಯಲ್ಲಿ ಅಚಂಚಲವಾದ ಶ್ರದ್ಧೆಯುಳ್ಳ ಸರ್ವಮಾನವರನ್ನೂ ಒಳಗೊಳ್ಳು ವಷ್ಟು ವ್ಯಾಪ್ತಿಯುಳ್ಳದ್ದಾಗಿರುವುದು. ಸತ್ಯ ಮತ್ತು ಅಹಿಂಸಾ ಮಾರ್ಗ ದಿಂದ ಜಗತ್ತಿನ ಸರ್ವ ಮಾನವರ, ಸರ್ವವಿಧದ ಏಳಿಗೆಯನ್ನೂ ಸಾಧಿಸಲು ಶ್ರಮಿಸುವುದೇ ಇದರ ಸದಸ್ಯರು ತೊಡತಕ್ಕ ವ್ರತ, ಮಾಡತಕ್ಕ ಕಾರ್ಯ ಗಳಾಗಿವೆ.

ಈ ಸಮಾಜವನ್ನು ಕುರಿತು ಪ್ರಕಟಿಸಿದ ಹೇಳಿಕೆಯನ್ನಿಲ್ಲಿ ನಿರೂಪಿಸು ವುದು ಅವಶ್ಯವಾಗಿದೆ.

**ಉದ್ದೇಶ :—** ಸತ್ಯ ಮತ್ತು ಅಹಿಂಸೆಯ ತಳಹದಿಯ ಮೇಲೆ, ಜಾತಿ, ಮತ, ಪಂಥ, ಭೇದವಿಲ್ಲದ, ಶೋಷಣರಹಿತವಾದ ಸಮಾಜ ವನ್ನು ರಚಿಸಿ, ಸರ್ವ ವ್ಯಕ್ತಿಗಳಿಗೂ, ಸರ್ವ ಗುಂಪುಗಳಿಗೂ ತಮ್ಮ ಏಳಿಗೆ ಮಾಡಿಕೊಳ್ಳುವ ಸಂಪೂರ್ಣ ಅವಕಾಶ ದೊರೆಯುವಂತೆ ಏರ್ಪಡಿಸುವದು.

**ಮೂಲ ತತ್ತ್ವ :—** ಈ ಮೇಲಣ ವಿವರಣೆಯ 'ಸಮಾಜ'ದ ಸದಸ್ಯರಾಗುವ ಪ್ರತಿಯೊಬ್ಬರೂ ಪರಿಶುದ್ಧವಾದ ಆಚರಣೆಯನ್ನಿಟ್ಟುಕೊಳ್ಳ ತಕ್ಕದ್ದು.

**ಕಾರ್ಯಾಚರಣೆ : —** " ಸರ್ವೋದಯ ಸಮಾಜ "ದ ಸ್ಥಾಪನೆಯ ಧ್ಯೇಯವನ್ನು ಸಾಧಿಸುವವರು ಮಾಡಬೇಕಾದ ಕಾರ್ಯಗಳು ಈ ಕೆಳಗೆ ಉಲ್ಲೇ ಖಿಸಿದಂತಿರುತ್ತವೆ :—

೧) ಜಾತೀಯ ಸೌಹಾರ್ದ:—ಭಿನ್ನ ಭಿನ್ನ ಜಾತಿ, ಮತ, ಧರ್ಮದ ಜನರು ಪರಸ್ಪರ ಅಣ್ಣತಮ್ಮಂದಿರಂತೆ ಪ್ರೇಮಾದರದಿಂದ ವರ್ತಿಸುವುದು.

೨) ಅಸ್ಪೃಶ್ಯತಾ ನಿವಾರಣೆ.

೩) ಶ್ರೀಮಂತ–ದರಿದ್ರ ಎಂಬ ವರ್ಗಭೇದವನ್ನು ಕಿತ್ತು ಹಾಕುವುದು.

೪) ಮದ್ಯವೇ ಮೊದಲಾದ ಮಾದಕ ಪದಾರ್ಥಗಳ ಉಪಯೋಗ ವನ್ನು ನಿಷೇಧಿಸುವುದು.

೫) ಖಾದಿ ಮತ್ತು ಇತರ ಗುಡಿ ಕೈಗಾರಿಕೆ (ಗ್ರಾಮೋದ್ಯೋಗ) ಗಳು ಹೆಚ್ಚುವಂತೆ ಮಾಡುವುದು.

೬) ಗ್ರಾಮ ಸ್ವಚ್ಛತೆ.

೭) ಮೂಲಶಿಕ್ಷಣ

೮) ಸ್ತ್ರೀ ಪುರುಷ ಸಮಾನತೆ.

೯) ಆರೋಗ್ಯ ರಕ್ಷಣೆ.

೧೦) ಪ್ರಾದೇಶಿಕ ಭಾಷೆಗಳ ಅಭಿವೃದ್ಧಿ.

೧೧) ಪ್ರಾಂತೀಯತಾ ಭಾವನೆಯನ್ನು ಕಿತ್ತೊಗೆಯುವದು

೧೨) ಹಿಂದುಸ್ತಾನಿಯನ್ನು ರಾಷ್ಟ್ರಭಾಷೆಯಾಗಿ ಒಪ್ಪುವುದು

೧೩) ಆರ್ಥಿಕ ಸಮಾನತೆ ಸಾಧಿಸುವುದು.

೧೪) ಕೃಷಿ–ಗೋರಕ್ಷಣೆಯ ಅಭಿವೃದ್ಧಿ ಪಡಿಸುವುದು.

೧೫) ಶ್ರಮಜೀವಿಗಳ ಸಂಘಟನೆಮಾಡುವುದು.

೧೬) ಆದಿವಾಸಿಗಳೇ ಮೊದಲಾದ ಅನಾಗರಿಕ ಗುಡ್ಡಗಾಡು ಜನರ ಏಳಿಗೆ ಮಾಡುವುದು

೧೭) ವಿದ್ಯಾರ್ಥಿಗಳ ಸಂಘಟನೆಮಾಡುವುದು.

೧೮) ಕುಷ್ಠರೋಗಿಗಳ ಶುಶ್ರೂಷೆ ಮಾಡುವುದು.

೧೯) ನಿಸರ್ಗ ಚಿಕಿತ್ಸೆಯಿಂದಲೇ ರೋಗ ನಿವಾರಣೆ ಮಾಡಿಕೊಳ್ಳು ವುದು.

೨೦) ಅಂಟುರೋಗದ ಹಬ್ಬುಗೆ, ನೆರೆಹಾವಳಿ, ಬೆಂಕಿಯ ಅಸಾಹುತ ಬರಗಾಲ ಮೊದಲಾದ ಆಪತ್ತುಗಳೊದಗಿದಾಗ ತಕ್ಕ ಪರಿಹಾರ ಕಾರ್ಯಗಳ ಯೋಜನೆ ಮಾಡುವುದು.

ಈ ರೀತಿಯ ಸಮಾಜದ ಸಂಘಟನೆಗೆ ಭಾರತದಷ್ಟು ಅನುಕೂಲ ದೇಶ ಬೇರಾವುದೂ ಇಲ್ಲ. ಇಂತಹ ಸಮಾಜವು ಉತ್ತರೋತ್ತರವಾಗಿ ಬೆಳೆದು, ಮಾನವ ಜಗತ್ತನ್ನೆ ಒಂದು ಹೊಸ ಮನ್ವಂತರಕ್ಕೆ ಒಯ್ಯುವುದು ಸಾಧ್ಯವಿದೆ. ಭಾರತದ ಧರ್ಮ-ಸಂಸ್ಕೃತಿಗಳು ಈ ಸಮಾಜಕ್ಕೆ ಪೋಷಕವಾದ ಹಿನ್ನೆಲೆ-ಯನ್ನೊದಗಿಸುವಂಥವುಗಳಾಗಿವೆ ಅದರ ಅರಿವಿನಿಂದ ಪ್ರಚೋದಿತರಾಗಿಯೇ ಮಹಾತ್ಮಾಗಾಂಧಿಯವರು ತಮ್ಮ ದಿವ್ಯ ರಾಜನೈತಿಕ ಪಥವನ್ನೂ, ಪಂಥ ವನ್ನೂ ನಿರ್ಮಿಸಿಕೊಂಡರೆನ್ನಬಹುದು.

## ಸರ್ವೋದಯಕ್ಕೆ ಪೋಷಕವಾದ ಹಿನ್ನೆಲೆ

"I believe that the civilization India has evolved is not to be beaten in the world. Nothing can equal the seeds sown by our ancestors. Rome went, Greece shared the same fate; the might of the Paraohs was broken; Japan has become westerinized; of China nothing can be said; but India is still, some how or other, sound at the foundation." (ಭಾರತವು ಪಡೆದಿರುವ ನಾಗರಿಕತೆಯು ಜಗತ್ತಿನ ಬೇರಾವ ನಾಗರಿಕತೆಯಿಂದಲೂ ಸೋಲಿಸಲ್ಪಡಲಾರದಷ್ಟು ಶ್ರೇಷ್ಠವಾದದ್ದೆಂದು ನಾನು ನಂಬಿದ್ದೇನೆ. ನಮ್ಮ ಪೂರ್ವಜರು ಬಿತ್ತಿದ ಬೀಜಕ್ಕೆ ಸಮನಾದದ್ದು ಬೇರೆ ಯಾವುದೂ ಇಲ್ಲ. ರೋಮನ್ ನಾಗರಿಕತೆ ನಾಶವಾಯಿತು, ಗ್ರೀಕ್ ನಾಗರಿಕತೆ ಅದೇ ಹಾದಿ ಹಿಡಿಯಿತು; ಪರೋಹರ ನಾಗರಿಕತೆಯ ದರ್ಪವು ಮುರಿದುಹೋಯಿತು; ಜಪಾನದ್ದು ಪಾಶ್ಚಾತ್ಯವನ್ನನುಕರಿಸಿತು; ಚೀನಾದ ಬಗ್ಗೆ ಏನೂ ಹೇಳಬರುವುದಿಲ್ಲ; ಆದರೆ ಭಾರತದ ನಾಗರಿಕತೆಯ ಬುಡವು ಮಾತ್ರ ಇನ್ನೂ ಭದ್ರವಾಗಿಯೇ ಇದೆ.)

— ಮಹಾತ್ಮಾ ಗಾಂಧಿ ("ಹಿಂದ ಸ್ವರಾಜ್ಯ")

ಕೆಲವು ದಿನಗಳ ಹಿಂದೆ ಭಾರತ ಸರಕಾರದ ಮಂತ್ರಿಗಳೊಬ್ಬರು ಮುಂಬಯಿಯ ಸಮಾರಂಭವೊಂದರಲ್ಲಿ ಭಾಷಣ ಮಾಡುತ್ತ, "ಭಾರತದಲ್ಲಿ ಸದ್ಯಕ್ಕೆ ಎತ್ತಿನಗಾಡಿ (ಚಕ್ಕಡಿ) ಸಾರಿಗೆ ಉದ್ದಿಮೆಯಲ್ಲಿ, ೮೨೦ ಕೋಟಿ ರೂಪಾಯಿಗೂ ಮಿಕ್ಕಿದ ಭಂಡವಳವು ದುಡಿಯುತ್ತಿದೆ" ಎಂದು, ಅಂಕೆ-ಅಂಶ ಗಳ ವರದಿಯ 'ಮಾಹಿತಿ'ಯ ಒಂದು ಚೂರನ್ನು ಎತ್ತಿ ತೋರಿದರು. ಅಣು

ಶಕ್ತಿಯ ಈ 'ಯುಗ'ದಲ್ಲಿಯೂ ಭಾರತದ ರೇಲ್ವೇಸಾರಿಗೆಯ ಉದ್ಯಮದಲ್ಲಿ ತೊಡಗಿರುವ ಒಟ್ಟು ಭಂಡವಲವು ೯೦೦ ಕೋಟಿ ರುಪಾಯಿಯನ್ನು ಮೀರಿರುವುದಿಲ್ಲ. ಅಂದಮೇಲೆ, ಭಾರತ ನಾಗರಿಕತೆಯ ಪ್ರಾರಂಭ ಕಾಲದಲ್ಲಿ ಬಳಕೆಯಲ್ಲಿದ್ದ ಎತ್ತಿನಗಾಡಿ ಸಾರಿಗೆ ಸಲಕರಣೆಯು ತುಸುವಾದರೂ ಕುಗ್ಗದೇ ಏರಿದ ಜನಸಂಖ್ಯೆ, ವಿಸ್ತರಿಸಿದ ಮಾರ್ಗಸೌಕರ್ಯ ಮತ್ತು ಜನಗಳ ಯಾತಾಯಾತಕ್ಕನುಗುಣವಾಗಿ, ಹಿಗ್ಗುತ್ತಲೇ ಬಂದಿದೆನ್ನಬಹುದಾಗಿದೆ. ಭಾರತದ ಜನತೆಯು ಇಂದಿಗೆ ಐದುಸಾವಿರ ವರ್ಷಗಳ ಹಿಂದೆ ಯಾವ ಬಗೆಯ ಆಹಾರ ವಿಹಾರ, ಆಚಾರ–ವಿಚಾರ, ವೇಷ–ಭೂಷಣ, ಕಲೆ–ಕೈಗಾರಿಕೆಗಳನ್ನುಳ್ಳದಾಗಿದ್ದಿತೋ ಅದೇ ಬಗೆಯವನ್ನು ಇಂದೂ ಉಳ್ಳದಾಗಿವೆ. ಕೃಷಿ-ವಾಣಿಜ್ಯ ಕ್ಷೇತ್ರಗಳು ಎಲ್ಲ ಕೆಲಸಗಳಿಗೂ ಯಂತ್ರೋಪಕರಣಗಳನ್ನೇ ಉಪಯೋಗಿಸಲಾಗುತ್ತಿರುವ ಈ ಕಾಲದಲ್ಲಿ, ಭಾರತವು ತನ್ನ ಪ್ರಾಚೀನ ಪರಂಪರಾಗತವಾಗಿ ಬಂದಿರುವ ರೆಂಟೆ (ನೇಗಿಲು) ಕುಂಟೆ, ಎಣ್ಣೆಗಾಣ-ಕಬ್ಬಿನಗಾಣ, ಕೈಮಗ್ಗ-ಕೈತಕ್ಕಡಿ ಮೊದಲಾದುವನ್ನೇ ಪ್ರಚಂಡ ಪ್ರಮಾಣದಲ್ಲಿ ಉಪಯೋಗಿಸುತ್ತಿದೆ. ಭಾರತದಲ್ಲೀಗ ನಲವತ್ತು ಸಾವಿರಕ್ಕೆ ಮಿಕ್ಕಿದ ಅಕ್ಕಿಗಿರಣಿ (Huller-Sheller) ಯಂತ್ರಗಳಿದ್ದರೂ ದೇಶಕ್ಕೆ ಬೇಕಾಗುವ ಅಕ್ಕಿಯ ಶೇಕಡಾ ೬೫ರಷ್ಟು ಪಾಲು ಕೈಮರಿಗೆ (ಕುಟ್ಟಿದ ಅಕ್ಕಿ) ಯಿಂದಲೇ 'ತಯಾರ್' ಆಗುತ್ತಿದೆ. ಇದೇ ಮಾತನ್ನು ಬಗೆಬಗೆಯ ಎಣ್ಣೆ, ಬೆಲ್ಲ, ಹಿಟ್ಟು ಮೊದಲಾದುವುಗಳಿಗೂ ಅನ್ವಯಿಸಿ ಹೇಳಬಹುದು. ಬಟ್ಟೆಬರೆ, ಪಾತ್ರೆಪರಡೆಗಳ ವಿಷಯದಲ್ಲಿಯೂ ಹಾಗೆಯೇ. ದೇಶಕ್ಕೆ ಬೇಕಾಗುವ ಈ ಎಲ್ಲ ವಸ್ತು ಒಡವೆ ಸಲಕರಣೆಗಳ ಶೇಕಡಾ ೬೦–೭೦ರಷ್ಟನ್ನು ನಮ್ಮ ಹಳ್ಳಿ-ಪೇಟೆ–ಪಟ್ಟಣಗಳ ಕೈಮಗ್ಗಗಳೂ, ಕಮ್ಮಾರಸಾಲೆ, ಬಡಿಗಸಾಲೆ, ಕುಂಬಾರಸಾಲೆಗಳೂ ಒದಗಿಸಿಕೊಡುತ್ತಿವೆ. ಸಾವಿರ ವರ್ಷಗಳ ಹಿಂದೆ ಇದ್ದ—ಉತ್ತು ಬಿತ್ತು ಬೆಳೆತೆಗೆಯುವ—ಕೃಷಿ ಕರ್ಮವಿಧಾನವು ಇಂದಿಗೂ ಹಬ್ಬಿಕೊಂಡಿದೆ. ಯಂತ್ರೋಪಕರಣಗಳೂ ರಾಸಾಯನಿಕ ಗೊಬ್ಬರಗಳೂ ಅನ್ಯದೇಶೀಯ ಬೀಜಗಳೂ ಒದಗಿ ಬರುತ್ತಿದ್ದರೂ ನಮ್ಮ ರಾಷ್ಟ್ರದ ಭೂವ್ಯವಸಾಯವು, ರುಪಾಯಿಗೆ ಹದಿನೈದು ಆಣೆಯಷ್ಟರಮಟ್ಟಿಗೆ, ಪರಂಪರಾಗತವಾದ ರೀತಿಯಲ್ಲೇ ಸಾಗುತ್ತಿದೆ!

ಇವೆಲ್ಲ ನಮ್ಮ ರಾಷ್ಟ್ರಸಂಸ್ಕೃತಿಯ ಬಹಿರಂಗದ ರೀತಿ-ರೂಪಗಳು; ಇವುಗಳಲ್ಲಿ, ಕಾಲಮಾನಕ್ಕನುಗುಣವಾಗಿ, ಕೆಲವೊಂದು ಹೆಚ್ಚು-ಕಡಿಮೆಗಳು ಕಂಡುಬರುತ್ತಿದ್ದರೂ, ಅವುಗಳ ತಿರುಳಿಗೆ ಹುಳಹಿಡಿದಿಲ್ಲ; ಇಂದಿಗೂ ಅದು ಹಚ್ಚಹಸುರಾಗಿಯೇ ಇದೆ. ಹಾಗೆಯೇ, ರಾಷ್ಟ್ರದ ಧರ್ಮ-ಕರ್ಮ, ನೀತಿ-ನಂಬಿಕೆ, ಸಾಹಿತ್ಯ-ಸಂಗೀತ, ಹಬ್ಬ-ಹುಣ್ಣಿವೆ ಮೊದಲಾದುವುಗಳೆಲ್ಲ ರಾಷ್ಟ್ರ ಸಂಸ್ಕೃತಿಯ ಅಂತರಂಗಗಳು; ಅವುಗಳಲ್ಲಿಯೂ ವಿಶೇಷ ಬದಲಾವಣೆಗಳಾಗದೆ, ನಾಲ್ಕೈದು ಸಾವಿರವರ್ಷಗಳ ಹಿಂದಿದ್ದಂತೆ ಇಂದೂ ಅವು ಜೀವಪೂರ್ಣವಾಗಿವೆ. ಕಾಶ್ಮೀರದಿಂದ ಕಾಮರೂಪದವರೆಗೆ, ಹಿಮಾದ್ರಿಯಿಂದ ಕನ್ಯಾಕುಮಾರಿಯವರೆಗೆ, ವೇದೋಪನಿಷತ್ತುಗಳೂ, ಬ್ರಹ್ಮ-ವಿಷ್ಣು-ಮಹೇಶ್ವರ ತ್ರಿಮೂರ್ತಿ ಕಲ್ಪನೆಯೂ, ಶ್ರುತಿ-ಸ್ಮೃತಿ ಪುರಾಣಗಳೂ, ಮಠ-ದೇವಾಲಯಗಳೂ, ಹರಿದಾಸ-ಶಿವಶರಣರ ಧರ್ಮಪ್ರಸಾರ ಪದ್ಧತಿಗಳೂ, ಕಾಶಿ, ರಾಮೇಶ್ವರ, ದ್ವಾರಕಾ, ಪುರಿ, ತಿರುಪತಿ, ಶ್ರೀಶೈಲಾದಿ ಕ್ಷೇತ್ರಗಳೂ, ರಥೋತ್ಸವಗಳೂ, ಗಂಗಾ ಯಮುನೆ ಕಾವೇರಿ ಗೋದಾವರಿ ನದಿಗಳೂ, ಸಾವಿರಾರು ವರ್ಷಗಳ ಹಿಂದಿದ್ದಂತೆ ಇಂದೂ ಭಾರತ ಜನಾಂಗದ ಭಕ್ತಿ-ಗೌರವ-ಆರಾಧನೆಗಳ ಪವಿತ್ರ ವಸ್ತುಗಳಾಗಿವೆ. ಜಾತ್ರೆಗಳು, ಸಂತೆಗಳು, ಬಗೆಬಗೆಯ ಬಯಲಾಟಗಳು, ಗರಡಿಸಾಧನೆಗಳು ಮೊದಲಾದ ಸಾಮೂಹಿಕ ಸಂಘ-ಸಂಸ್ಥೆಗಳು ಎಷ್ಟೋ ಸಾವಿರವರ್ಷಗಳ ಹಿಂದೆ ಹುಟ್ಟಿದ್ದರೂ—ಇಂದು ದಷ್ಟಪುಷ್ಟವಾಗಿ ನಿಮಿರಿ ನಿಂತಿವೆ. ವರ್ಣಾಶ್ರಮಗಳು, ಜಾತಿ ಮತ ಕುಲ ಕಸಬುಗಳು, ಹಾಗೂ ಅವುಗಳ ನಿತ್ಯ ನೈಮಿತ್ತಿಕ ಆಚಾರ-ವಿಚಾರ, ಕಟ್ಟು ಕಟ್ಟಳೆಗಳು, ಇಂದಿಗೂ ನಡೆಯುತ್ತಿವೆ. ಎಷ್ಟು ವಿಧವಾಗಿ ಸಾಂಕರ್ಯ-ಸಮನ್ವಯಗಳನ್ನು ಹೊಂದಿದ್ದರೂ, ಆರ್ಯ-ದ್ರಾವಿಡ ಧರ್ಮ-ಸಂಸ್ಕೃತಿ ಸಮಾಜ ಪದ್ಧತಿಗಳ ಮೂಲಸೆಲೆಗಳು ಇಂದಿಗೂ ಪುಟಿಯುತ್ತಲೇ ಇವೆ; ಜೀವಂತ ಶಕ್ತಿಗಳಾಗಿ ಜನತೆಯನ್ನು ಹುರಿದುಂಬಿಸುತ್ತಲೇ ಇವೆ.

ಈ ಮೇಲಣವಿವರಣೆಗಳಿಂದೆಲ್ಲ ಒಂದು ಮಾತು ಸಿದ್ಧವಾಗುವುದು. ಕಳೆದ ಹತ್ತು ಶತಮಾನದ ಅವಧಿಯಲ್ಲಿ ಭಾರತದ ಜನಜೀವನವು, ಅನೇಕ ಪರಕೀಯ ದಾಳಿಗಳನ್ನಿದಿರಿಸಿ, ಉನ್ನತಿ-ಅವನತಿಗಳ ಏರಿಳಿತದ ದಾರಿಯನ್ನು ನಡೆದು ಬಂದರೂ, ಅದು ತನ್ನ ಧರ್ಮವನ್ನು, ತನ್ನ ಸಂಸ್ಕೃತಿಯನ್ನು, ತನ್ನ

ಹುಟ್ಟುಗುಣದ ತನ್ನತನವನ್ನು ಕಳೆದುಕೊಳ್ಳಲಿಲ್ಲ; ಅತಿಥಿ-ಅಭ್ಯಾಗತರನ್ನು ಪ್ರೇಮಾದರದಿಂದ ಸ್ವಾಗತಿಸಿ, ತನ್ನ ಮನೆಯ ಒಂದು ಕೋಣೆಯನ್ನೋ, ಪಡಸಾಲೆಯನ್ನೋ, ಜಗುಲಿಯನ್ನೋ ಅವರದೇ ಸ್ವತ್ತಾಗುವಂತೆ ಬಿಟ್ಟು ಕೊಟ್ಟಿತಾದರೂ, ಅವರ ಧರ್ಮ-ಸಂಸ್ಕೃತಿಗಳಿಗೆ ಮಾರುಹೋಗಲಿಲ್ಲ; ಅವರ ನಡೆನುಡಿಗಳಿಗೆ ತಲೆಬಾಗಲಿಲ್ಲ. ವಿದೇಶೀಯವಾದ ಇಸ್ಲಾಂ, ಕ್ರೈಸ್ತ, ಪಾರ್ಸಿ, ಯಹೂದೀ ಧರ್ಮಗಳ ಜನಕ್ಕೆ ಭಾರತವು ಆಶ್ರಯವಿತ್ತಿತು; ಮತ್ತು ಅವರ ಗುಡಿ–ಗೋಪುರಗಳ ಬೆಳವಣಿಗೆಗೂ, ಧರ್ಮ ಸಂಸ್ಕೃತಿ-ಸಂಪ್ರದಾಯ ಗಳ ಪ್ರಸಾರಕ್ಕೂ ಅವಕಾಶಕೊಟ್ಟಿತು. ಅನ್ಯ ರಾಷ್ಟ್ರಗಳ ಅನೇಕ ನಾಗರಿಕತೆ ಗಳು ಹೇಳಹೆಸರಿಲ್ಲದಂತೆ ಹಾಳಾಗಿ ಹೋದರೂ ಭಾರತದ ನಾಗರಿಕತೆಯು ನಿತ್ಯನೂತನವಾಗಿ, ಹೂ ಹಣ್ಣುಗಳಿಂದ ತುಂಬಿದ ಹೆಮ್ಮರದಂತೆ, ನೂರಾರು ಹಕ್ಕಿಪಕ್ಕಿಗಳಿಗೆ ಆಶ್ರಯವನ್ನೂ, ಹಾದಿಹೋಕರಿಗೆ ತಂಪಾದ ನೆರಳನ್ನೂ ನೀಡುತ್ತ, ಅಚಲ ಹಿಮಾಚಲದಂತೆ ತಲೆಯೆತ್ತಿ ನಿಂತಿದೆ. ಅದರ ಈ ಸರ್ವ ಶ್ರೇಷ್ಠತೆಗೆ ಕಾರಣವೇನು ? ಅದರ ಈ ನಿತ್ಯನೂತನತೆಯ ಚಿರಂಜೀವತ್ವಕ್ಕೆ ಅದು ಸೇವಿಸಿದ ಅಮೃತವಾವುದು ? ಎಂಬುದು ವಿಚಾರಣೀಯವಾಗಿದೆ.

# "ಸಂಸ್ಕೃತಿ"

ಭಾರತದೇಶದ ಸಂಸ್ಕೃತಿಯು, ಮೇಲೆ ಹೇಳಿದಂತೆ, ಅಜರವಾಗಿಯೂ ಅಮರವಾಗಿಯೂ ನಡೆದು ಬರಲಿಕ್ಕೆ, "ಸಂಸ್ಕೃತಿ" ಪದಕ್ಕೆ ಅದು ಇಟ್ಟು ಕೊಂಡಿರುವ ಮೂಲಾರ್ಥವೇ ಕಾರಣವಾಗಿದೆ. ಸಂಸ್ಕೃತಿ ಎಂಬ ಪದವು 'ಸಂಸ್ಕಾರ' ಎಂಬುದರಿಂದ ರೂಪುವಡೆದಿದೆ; ಸಮ್ಯಕ್+ಕೃತಿ ಎಂದರೆ, ಒಳ್ಳೆಯದಾದ ಅಥವಾ ಶುದ್ಧಮಾಡಿದ ಕೆಲಸ ಅಥವಾ ವಸ್ತು. ಈ ಪ್ರಪಂಚವು ಕಣ್ಣಿಗೆ ಕಾಣುವ ಮತ್ತು ಕಣ್ಣಿಗೆ ಕಾಣಿಸದ ದೃಶ್ಯಾದೃಶ್ಯ ವಸ್ತುಗಳ ಹಿತಮಿತ ಮಿಶ್ರಣದಿಂದ ಆದ ಒಂದು ವಸ್ತು. ಆದ್ದರಿಂದ ಅದರ ಸಂಸ್ಕೃತಿ ವ್ಯಾಪಾರದಲ್ಲಿ ಬಹಿಸ್ಸಂಸ್ಕಾರ ಮತ್ತು ಅಂತಸ್ಸಂಸ್ಕಾರ—ಎಂಬ ಇಬ್ಬಗೆ ಅನಿವಾರ್ಯವೆನಿಸುವುದು.

ಮನುಷ್ಯನು ತನ್ನ ವಸತಿ ನಿರ್ಮಾಣಕ್ಕಾಗಿ ಕಾಡಿನ ಕೆಲವು ಭಾಗ ಗಳನ್ನು ಕಡಿದು, ದಿನ್ನೆಯನ್ನು ಸಮತಟ್ಟಾಗಿ ಹರಹುತ್ತಾನೆ; ನೀರಿಗಾಗಿ ಭಾವಿತೋಡುತ್ತಾನೆ, ಇಲ್ಲವೆ ಸೆಲೆಯಿದ್ದ ಕೆರೆಗೆ ಕಟ್ಟೆ ಕಟ್ಟುತ್ತಾನೆ. ಹಾಗೆಯೇ, ವರ್ಷ ವರ್ಷವೂ ಹುಲ್ಲು ಹೊದಿಸುವ ಮಾಡಿನ ಬದಲು, ಬಹು ಕಾಲ ಬಾಳುವ ಹಂಚಿನಮಾಡನ್ನೊ, ಗಚ್ಚಿನ ಮೆತ್ತನ್ನೋ ಮಾಡುತ್ತಾನೆ. ಹೀಗೆ, ಸ್ವಚ್ಛಂದವಾಗಿ ಬೆಳೆದು ಹಬ್ಬಿದ ಪ್ರಕೃತಿಯನ್ನು ಪಳಗಿಸಿಕೊಂಡು ತನ್ನ ವಸತಿಸೌಕರ್ಯವನ್ನೂ ಆಹಾರ ಸೌಲಭ್ಯವನ್ನೂ ಮಾಡಿಕೊಳ್ಳುತ್ತಾನೆ. ಹಾಗೆಯೇ ತನ್ನ ಮನೆಯನ್ನು ಸ್ವಚ್ಛಪಡಿಸಿಕೊಂಡು, ಗಾಳಿ-ಬೆಳಕುಗಳ ಶುದ್ಧ ಹವೆ ದೊರೆಯುವಂತೆಯೂ, ಕೂಡ್ರಲಿಕ್ಕೆ, ಮಲಗಲಿಕ್ಕೆ ಕುರ್ಚಿ, ಮಂಚ ಮೊದಲಾದ ಸಲಕರಣೆಗಳನ್ನೂ, 'ಅಣಿ' ಗೊಳಿಸಿಕೊಳ್ಳುತ್ತಾನೆ; ಪ್ರತಿದಿನವೂ ಅವನ್ನೆಲ್ಲ ತೊಳೆದು, ಉಜ್ಜಿ ಸುಖಕರವಾಗುವಂತೆ ಶುಚಿಗೊಳಿಸಿಕೊಳ್ಳು ತ್ತಾನೆ. ಇದಕ್ಕೆ 'ಗೃಹಸಂಸ್ಕಾರ' ಎನ್ನುತ್ತೇವೆ; ಊರು-ಕೇರಿಗಳ ಶುಚಿತ್ವ (ಶುದ್ಧೀಕರಣ) ಕಾರ್ಯಕ್ಕೆ 'ಗ್ರಾಮಸಂಸ್ಕಾರ' ಎನ್ನುತ್ತೇವೆ. ಹೀಗೆಯೇ, ಮನುಷ್ಯನು ತನ್ನ ಮೈ ಕೈಗಳನ್ನು ನಿತ್ಯವೂ 'ಮಿಾಯಿಸಿ' ಶುದ್ಧವಾಗಿಟ್ಟು ಕೊಳ್ಳುವುದಕ್ಕೆ 'ದೇಹಸಂಸ್ಕಾರ' ಎನ್ನುತ್ತೇವೆ ಈ ದೇಹಸಂಸ್ಕಾರದಲ್ಲಿ

ಹೊರಗಿನ ಮಲನಿವಾರಣೆ ಮತ್ತು ಒಳಗಿನ ಮಲನಿವಾರಣೆ ಎಂಬ ಇಬ್ಬಗೆ ಇರುತ್ತದೆ. ಹಿತಕರವೂ ಪೌಷ್ಟಿಕವೂ ಆದ ಅನ್ನಪಾನಾದಿಗಳ ಸೇವನೆಯಿಂದಲೂ ವ್ಯಾಯಾಮ-ವಿನೋದಗಳಿಂದಲೂ ಮನುಷ್ಯನು ನಿರೋಗಿಯಾಗಿ, ಪ್ರತಿದಿನವೂ ಒಳಗಿನ ಮಲವನ್ನು ಹೊರಹಾಕಿ ಶುದ್ಧನಾಗುತ್ತಾನೆ; ಹಾಗೆಯೇ ತನ್ನ ಉಡುತೊಡುವ ಬಟ್ಟೆಬರೆಗಳನ್ನೂ, ತಿನ್ನುಣ್ಣುವ ಪಾತ್ರೆ ಪಡಿಗಳನ್ನೂ ತೊಳೆದು, ಬೆಳಗಿ ಶುದ್ಧವಾಗಿರಿಸಿಕೊಳ್ಳುತ್ತಾನೆ; ಇವಕ್ಕೆ 'ವಸ್ತ್ರಸಂಸ್ಕಾರ' 'ಪಾತ್ರೆಸಂಸ್ಕಾರ' ಎನ್ನುತ್ತೇವೆ. ಈ ದೃಶ್ಯಸಂಸ್ಕಾರಗಳಂತೆ ಅದೃಶ್ಯವಾದ ಮನೋಬುದ್ಧಿಗಳನ್ನು ಶುಚಿಯಾಗಿಯೂ, ಸುಂದರವಾಗಿಯೂ, ಸುದೃಢವಾಗಿಯೂ ಇರುವಂತೆ ಮಾಡಿಕೊಳ್ಳುವ 'ಸಂಸ್ಕಾರ'ವೂ ಇದೆ; ಅದೇ ಅಂತಸ್ಸಂಸ್ಕಾರ ವ್ಯಕ್ತಿಯು ಮಾಡಿಕೊಳ್ಳುವ ಈ ರೀತಿಯ ಬಹಿರಂತಸ್ಸಂಸ್ಕಾರಗಳ ಕುರಿತು, ಸ್ಮೃತಿಕಾರನಾದ ಮನುವು ಹೇಳಿದ ಮಾತೊಂದನ್ನಿಲ್ಲಿ ಎತ್ತಿಹೇಳಬಹುದು—

"ಅದ್ಭಿರ್ಗಾತ್ರಾಣಿ ಶುದ್ಧ್ಯನ್ತಿ, ಮನಸ್ಸತ್ಯೇನ ಶುದ್ಧ್ಯತಿ
ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುದ್ಧ್ಯತಿ"

( —೧೦·)

ಅಂದರೆ, ಬೆವರು, ಕೊಳೆ ಮೊದಲಾದವುಗಳಿಂದ ಅಶುಚಿಯಾಗಿ ಕೆಡುವ ದೇಹವನ್ನು ನೀರಿನಿಂದಲೂ, ಕೆಟ್ಟ ವಿಚಾರಗಳಿಂದ ಕೆಡುವ ಮನಸ್ಸನ್ನು ಸತ್ಯದಿಂದಲೂ, ಸೂಕ್ಷ್ಮ ಶರೀರವೆನಿಸುವ ಅಂತಃಸತ್ವವನ್ನು ವಿದ್ಯೆ ಮತ್ತು ತಪಸ್ಸಿನಿಂದಲೂ, ಬುದ್ಧಿಯನ್ನು ಹಿತಾಹಿತ ವಿವೇಚನೆಯಿಂದಲೂ ಸಂಸ್ಕರಿಸಿ, ಶುದ್ಧಿ ಮಾಡಿಕೊಳ್ಳತಕ್ಕದ್ದು. ಈ ರೀತಿಯ ಹೊರ ಒಳಗಿನ ಶುದ್ಧಿ ಸಂಸ್ಕರಣ ಕಾರ್ಯಗಳಿಂದ ಪ್ರತಿಫಲಿತವಾಗುವ ಸದ್ಗುಣ ಸಮುಚ್ಚಯವೇ ಸಂಸ್ಕೃತಿ: ಅದುಳ್ಳವನೇ ಸಂಸ್ಕೃತ; ಸುಸಂಸ್ಕೃತ; ಸುಸಂಸ್ಕೃತ ವ್ಯಕ್ತಿಗಳ ಸಮುದಾಯವೇ ಸುಸಂಸ್ಕೃತ ಸಮಾಜ.

ಸಂಸ್ಕೃತಿಯಲ್ಲಿ—ಇತರ ಎಲ್ಲ ವಿಷಯಗಳಲ್ಲಿಯೂ ಇರುವಂತೆ—ಸಾಮಾನ್ಯ ಮತ್ತು ವಿಶೇಷ ಎಂಬ ಎರಡು ತೆರಗಳುಂಟು. ಒಂದು ಮರಕ್ಕೆ ಕಾಂಡ ಮತ್ತು ರೆಂಬೆಕೊಂಬೆಗಳಿರುವಂತೆ, ಸಾಮಾನ್ಯ ಸಂಸ್ಕೃತಿಯು ಕಾಂಡವಾಗಿಯೂ, ವಿಶೇಷ ಸಂಸ್ಕೃತಿಗಳು ರೆಂಬೆಕೊಂಬೆಗಳಾಗಿಯೂ ಇರುತ್ತವೆ.

ಭಾರತೀಯ ಜನಾಂಗ ವೆಂಬುದು ಒಂದು ವೃಕ್ಷವಾದರೆ, ಅದರಲ್ಲಿ ಅಡಕ ಗೊಂಡಿರುವ ವಿವಿಧ ಜಾತಿ ಮತ-ಪಂಥಗಳು ಅದರ ವಿವಿಧ ಶಾಖೋಪ ಶಾಖೆಗಳು. ಒಂದು ಶಾಖೆಯು ಮತ್ತೊಂದು ಶಾಖೆಯಂತಿರುವುದಿಲ್ಲ, ಹಾಗೆಯೇ, ಒಂದು ಉಪಶಾಖೆಯು ಮತ್ತೊಂದರಂತಿರುವುದಿಲ್ಲ; ಆದರೂ ಅವುಗಳನ್ನೆಲ್ಲ ಹೊತ್ತುಕೊಂಡ ಕಾಂಡವು ಏಕಾಕೃತಿಯಲ್ಲಿ ಬೆಳೆದಿರುತ್ತದೆ. ಹಾಗೆಯೇ ಭಾರತೀಯ ಜನಾಂಗದ ವಿವಿಧ ಪ್ರಾದೇಶಿಕ ಕ್ಷೇತ್ರಗಳಿಗೂ ತಮತಮದೇ ಆದ ವಿಶೇಷ ಸಂಸ್ಕೃತಿಗಳುಂಟು. ಹೇಗೆ ಎಲ್ಲ ಶಾಖೋಪಶಾಖೆಗಳಿಗೂ ಕಾಂಡವೇ ಜೀವರಸವನ್ನೊದಗಿಸುತ್ತದೋ ಹಾಗೆ ಎಲ್ಲ ಸಮಾಜಗಳ ಮತ್ತು ಎಲ್ಲ ಪ್ರದೇಶಗಳ ವಿಶಿಷ್ಟ ಸಂಸ್ಕೃತಿಗಳಿಗೆ ಸಮಷ್ಟಿ ಜನಾಂಗದ ಸಾಮಾನ್ಯ ಸಂಸ್ಕೃತಿಯು ಜೀವರಸವನ್ನೊದಗಿಸುತ್ತದೆ. ಭಾರತ ಜನಾಂಗದ ಸಾಮಾನ್ಯ ಸಂಸ್ಕೃತಿಯೆಂಬುದೇ ''ಧರ್ಮ''. ಆ ಕಾರಣದಿಂದಾಗಿಯೇ, ಪ್ರಾಚೀನಕಾಲದಿಂದಲೂ ಜಗತ್ತಿನ ಸರ್ವರಾಷ್ಟ್ರಗಳೂ ಭಾರತವನ್ನು ''ಧಾರ್ಮಿಕ ದೇಶ'' 'ಆಧ್ಯಾತ್ಮಿಕವಾದಿ ರಾಷ್ಟ್ರ' ಎಂದು ಕರೆಯುತ್ತಲೇ ಬಂದಿವೆ; ಇಂದಿಗೂ ಅದೇ ಭಾರತದ ಅಂತಾರಾಷ್ಟ್ರೀಯ ಕೀರ್ತಿಕೇತನವಾಗಿದೆ. ಆ **ಧರ್ಮ ಪ್ರಭಾವ**ದಿಂದಲೇ ಭಾರತವು ಅತ್ಯಂತ ಬಲಿಷ್ಠವಾದ ಬ್ರಿಟಿಶ ಸಾಮ್ರಾಜ್ಯಶಾಹಿಯ ಹೃದಯ ಪರಿವರ್ತನಮಾಡಿ ಸ್ವಾತಂತ್ರ್ಯವನ್ನು ಸಂಪಾದಿಸಿತು; ಹಾಗೂ ಇಂದಿನ ಭಾರತದ ಅಂತರ ರಾಷ್ಟ್ರೀಯ ಶಕ್ತಿ-ಸಾಮರ್ಥ್ಯವೂ ಅದೇ ಆಗಿದೆ." ಲೋಕಾಸ್ಸಮಸ್ತಾಸ್ಸುಖಿನೋಭವಂತು"—ಸರ್ವಲೋಕವೂ ಸುಖದಿಂದಿರಲಿ—ಇದೇ ಭಾರತ ಧರ್ಮಸಾರ; ಇದೇ ಭಾರತದ ಸಾಮಾನ್ಯ ಸಂಸ್ಕೃತಿ. ವಿವಿಧತೆಯಲ್ಲಿಯೂ ಏಕತೆ, ಏಕತೆಯಲ್ಲಿಯೂ ವಿವಿಧತೆ-ಎಂಬ ಸಹಜೀವನ ಪದ್ಧತಿಯೇ ಭಾರತ ಸಂಸ್ಕೃತಿಯ ಸಮಾಜ ಪದ್ಧತಿ. ಈ ಪದ್ಧತಿಯಿಂದ ನಡೆವುದರಿಂದಲೇ ಜಗತ್ತಿನ ಸರ್ವ ರಾಷ್ಟ್ರಗಳೂ, ಅವುಗಳ ಜನಾಂಗಗಳೂ ಇಹಪರ ಸುಖ ಸಮೃದ್ಧಿಗಳನ್ನು ಪಡೆಯಲು ಸಮರ್ಥವಾಗುವುವು—ಎಂಬುವೇ ಭಾರತದ ಜಾಗತಿಕ ಸಂದೇಶ.

# ಸಹಜೀವನ ಧರ್ಮ-ಕರ್ಮ

"ಸಂಗಚ್ಛಧ್ವಂ ಸಂವದಧ್ವಂ ಸಂವೋಮನಾಂಸಿ ಜಾನತಾಂ
ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ
ಸಹ ಚಿತ್ತಂ ಏಷಾಂ ।
ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ
ಸಮಾನಂ ಅಸ್ತುವೋ ಮನೋಯಥಾವಃ ಸುಸಹಾ ಸತಿ"

(ಋಗ್ವೇದ)

(ಒಟ್ಟಾಗಿ ನಡೆಯಿರಿ, ಒಟ್ಟಾಗಿ ನುಡಿಯಿರಿ; ಒಂದೇ ಮನಸ್ಸಿನವರಾಗಿರಿ.
ನಿಮ್ಮ ಧ್ಯೇಯ ಒಂದೇ ಆಗಿರಲಿ, ಒಂದೇ ಸಮಾಜವಾಗಿರಿ.
ಒಂದೇ ಚಿತ್ತದವರಾಗಿರಿ, ಒಂದೇ ಹೃದಯದವರಾಗಿರಿ.
ಐಕ್ಯಚಿತ್ತರಾಗಿ ಒಟ್ಟಾಗಿ ಬಾಳಿ ಸುಖಿಸಿರಿ. )

ಭಾರತದ ಸಂಸ್ಕೃತಿಯು ಧರ್ಮಬದ್ಧವಾದುದೆಂದೂ, 'ಸಹಜೀವನ' ಸಮಾಜವೇ ಆ ಧರ್ಮಪುರುಷನ ವ್ಯಕ್ತರೂಪವೆಂದೂ ಹೇಳಿದೆವಷ್ಟೆ. ಧರ್ಮವೆಂಬ ಪದಕ್ಕೆ ಸಮನಾದ ಬೇರೊಂದು ಪದವು ಜಗತ್ತಿನ ಬೇರಾವ ಸಮಾಜದಲ್ಲಿಯೂ ಕಂಡು ಬರುವದಿಲ್ಲ; ಅದನ್ನು 'ರಿಲಿಜನ್' 'ಫೈತ್' (ಮತಶ್ರದ್ಧೆ) ಎಂಬ ಪದಗಳಿಂದ ಸ್ಪಷ್ಟೀಕರಿಸಬರುವದಿಲ್ಲ. 'ಧಾರಣಾತ್ ಧರ್ಮಃ' —ಧರಿಸುವಿಕೆಯಿಂದಲೇ ಧರ್ಮ ಎಂಬ ವಿಶಾಲಾರ್ಥವುಳ್ಳದ್ದರಿಂದಲೇ—ಸಾಗರಕ್ಕೆ ಸಾಗರವೇ ಉಪಮೆ, ಆಕಾಶಕ್ಕೆ ಆಕಾಶವೇ ಹೋಲಿಕೆಯೆಂದಂತೆ--ಧರ್ಮ ಪದವು ಅನುಪಮವಾಗಿ ನಿಂತಿದೆ. ಯಾವುದು ಮನುಷ್ಯನನ್ನು ಬೀಳಗೊಡುವುದಿಲ್ಲವೋ ಅದೇ ಧರ್ಮ ಎಂಬುದೇ ಅದರ ತಾತ್ಪರ್ಯ. ಬೀಳುವಿಕೆ ಎಂದರೆ ದುರ್ಬಲವಾಗಿ ಉರುಳುವುದು, ಅಥವಾ ಕೆಲಸಕ್ಕೆ ಬಾರದಂತಹ ಸ್ಥಿತಿಗೆ ಬಂದುಮುಟ್ಟುವುದು. ಈ 'ಬೀಳುವಿಕೆ'ಯಲ್ಲಿ ವ್ಯಾಧಿಗಳಿಂದಾಗುವ ದೈಹಿಕ ದುರ್ಬಲತೆ ಮತ್ತು ಆಧಿಗಳಿಂದಾಗುವ ಮಾನಸಿಕ ದುರ್ಬಲತೆ ಎಂಬ ಇಬ್ಬಗೆಯ ಬೀಳುವಿಕೆಗಳು ಅಡಕವಾಗಿರುತ್ತವೆ. **ಬೀಳುವಿಕೆಗೆ ಅಸ್ಪದವೀಯದ 'ಧರ್ಮ'ವು ಚರಾಚರವಾದ**

ಸಕಲ ಭೂತಗಳಲ್ಲಿಯೂ ಜನ್ಮತಃ ಬಂದಿರುತ್ತದೆ. ಈ ಜಗತ್ತನ್ನೂ ಅದರೊಳಗಿನ ಚರಾಚರ ಭೂತಗಳನ್ನೂ ಸೃಜಿಸಿದ ಯಾವ ಮಹಾಶಕ್ತಿ ಇದೆಯೋ ಅದು ಹೀಗೆ ಹೇಳುತ್ತದೆ:—*

"ಇದೋ, ನೆಲ, ಜಲ, ಗಾಳಿ, ಬೆಳಕು, ಆಕಾಶಸಹಿತವಾದ ಈ ಲೋಕವನ್ನು ರಚಿಸಿದ್ದೇನೆ; ಅದೇ ಪಂಚಭೂತಗಳಿಂದ ನಿನ್ನನ್ನು ರಚಿಸಿ, ಅದರೊಳಗೆ ಬಿಟ್ಟಿದ್ದೇನೆ ಅದನ್ನು ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯವನ್ನು ನಿನಗೆ ಕೊಟ್ಟಿದ್ದೇನೆ; ಸುಖವೋ ದುಃಖವೋ ಅದಕ್ಕೆ ನಿನ್ನ ಧರ್ಮಾಧರ್ಮವೇ ಕಾರಣ." "ದೇವಲೋಕ ಮರ್ತ್ಯಲೋಕ ಎಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೇ ಮತ್ತೆ ಅನಂತಲೋಕ!" ಎಂಬ ಹಾಗೂ "ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ" ಎಂಬ ಬಸವೇಶ್ವರ ವಚನಗಳೂ ಇದೇ ತಾತ್ಪರ್ಯವನ್ನೇ ಹೇಳುತ್ತವೆ. ಧರ್ಮದಿಂದ ಹೊರಟು ದೇವರನ್ನು ಸೇರುವುದೇ ಮಾನವ ಜೀವಿತದ ಗುರಿಯಲ್ಲವೆ? ಆ ಗುರಿಗೆ ಒಯ್ಯುವ ದಾರಿಯೇ ಕರ್ಮ. ಅದನ್ನು ಹೀಗೆ ಸೂಚಿಸಬಹುದು—

## ಧರ್ಮ ^ಕರ್ಮ^ ದೇವರು

ಧರ್ಮ ಪದಕ್ಕೆ ಧಾರಣವು ಮೂಲವಾದಂತೆ, ದೇವ ಪದಕ್ಕೆ (ದಿವ್=ಆಚ್) ಪ್ರಕಾಶಿಸುವುದು ಎಂಬುದೇ ಮೂಲ. ತನ್ನ ದೇಹ ಮತ್ತು ಮನಸ್ಸುಗಳನ್ನು ಬೀಳದಂತೆ ಭದ್ರವಾಗಿಟ್ಟುಕೊಂಡು ಮಾಡುವ ಕರ್ಮಗಳಿಂದ

* ಗಿರಯಸ್ತೇ ಪರ್ವತಾ ಹಿಮವಂತೋರಣ್ಯಂ
ತೇ ಪೃಥಿವೀ ಸ್ಯೋನಮ್ ಅಸ್ತು
ಬ್ರಭ್ರುಂ ಕೃಷ್ಣಾಂ ರೋಹಿಣೀಂ ವಿಶ್ವರೂಪಾಂ
ಅಜೀತೋಹತೊ ಅಕ್ಷತೋಧ್ಯಷ್ಠಾಂ ಪೃಥಿವೀಂ ಅಹಂ ||

—ಅಥರ್ವವೇದ

(ಹಿಮದಿಂದಲೂ, ಪರ್ವತಗಳಿಂದಲೂ, ಅರಣ್ಯಗಳಿಂದಲೂ ಆಚ್ಛಾದಿತಳಾದ ಭೂಮಾತೆ! ಕಪ್ಪು, ಕೆಂಪು, ಕಂದು, ತಾಮ್ರವರ್ಣಗಳ ವಿಶ್ವರೂಪಿಣಿ! ಅಜಿತನಾಗಿ, ಅಹತನಾಗಿ, ಅಕ್ಷತನಾಗಿ ನಾನು ನಿನ್ನಲ್ಲಿ ಕಾಲಿರಿಸಿದ್ದೇನೆ.)

'ದೇವ'ತ್ವವನ್ನು ಪಡೆಯುವುದು ಅರ್ಥಾತ್ ತೇಜೋವಂತನಾಗುವುದು. ಇದರಲ್ಲಿ ಕರ್ಮದ ಶುಚಿತ್ವ (Purity of means) ಮತ್ತು ಅಚಂಚಲತೆಗಳು ಕಾದುಕೊಳ್ಳಲ್ಪಡಬೇಕು ಧರ್ಮವೆಂಬುದು ಒಂದು ಮಹಾರಣ್ಯದಂತಿದ್ದರೆ, ಅದರೊಳಗೆ ಅನೇಕಾನೇಕ ವಿಶೇಷಧರ್ಮಗಳೆಂಬ ದಾರಿ-ಒಳದಾರಿಗಳು ಹಲವಿವೆ. ತುಸು ಲಂಬಿಸಿ ಹೇಳುವುದಾದರೆ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿಗಳೆಂಬ ವಿವಿಧ ಜಾತಿಧರ್ಮಗಳೂ, ಅವುಗಳೊಳಗಿನ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬ ಆಶ್ರಮಧರ್ಮಗಳೂ ಕಂಡುಬರುತ್ತವೆ. ಈ 'ವರ್ಣಾಶ್ರಮ'ಬದ್ಧವಾಗಿರುವ ಸಾಮೂಹಿಕ ಸಮಾಜಧರ್ಮಗಳೆಲ್ಲಕ್ಕೂ ಸಮಾನವಾಗಿರುವ ಧರ್ಮಗಳು ಬೇರೆ ಉಂಟು. ಉದಾಹರಣೆಗೆ— ಪುರುಷ ಧರ್ಮ, ಸ್ತ್ರೀ ಧರ್ಮ, ಪತಿ ಧರ್ಮ, ಸತಿ ಧರ್ಮ, ಪುತ್ರ ಧರ್ಮ, ಪಿತೃ ಧರ್ಮ, ದೇಶ ಧರ್ಮ, ಕಾಲ ಧರ್ಮ, ದೇಹ ಧರ್ಮ— ಹೀಗೆ ಬಗೆಬಗೆಯ ವೈಯಕ್ತಿಕ ಧರ್ಮಗಳೂ, ಅವವುಗಳಿಗೆ ತಕ್ಕುದಾದ ಕರ್ಮಗಳೆಂಬ ದಾರಿ (ನಡೆವಳಿ)ಗಳೂ ಉಂಟು. ಒಳ್ಳೆಯ ಬ್ರಹ್ಮಚಾರಿಯು ಒಳ್ಳೆಯ ಗೃಹಸ್ಥನಾಗುತ್ತಾನೆ. ಬಾಲ್ಯದಿಂದ ವಿವಾಹದತನಕ ವೀರ್ಯಧಾರಣ ಮಾಡಿಕೊಂಡು ನೈಷ್ಠಿಕನಾಗಿ ವಿದ್ಯಾವ್ಯಾಸಂಗಿಯಾಗಿ ನಡೆದವನು ಸುಖಮಯವಾದ ದಾಂಪತ್ಯಜೀವನ ನಡೆಸಲು ಸಮರ್ಥನಾಗುವನು. ಅದೇ ರೀತಿಯಲ್ಲಿ ಪ್ರತಿಯೊಂದು ವ್ಯಕ್ತಿಯೂ, ಪ್ರತಿಯೊಂದು ಸಮಾಜವೂ ತನತನಗೆ ನಿಯತವಾದ ನಡೆವಳಿಕೆಯಲ್ಲಿ ಸಾಗಿದರೆ, ಕೃತಾರ್ಥವೆನಿಸುವುದು ಹಾಗೂ ಜೀವನದ ಗುರಿಯಾದ ಸುಖ ಶಾಂತಿ ಸಮೃದ್ಧಿಯನ್ನು ಪಡೆಯುವುದು. ಈ ಧರ್ಮದ ಮಹತಿಯನ್ನು ಋಗ್ವೇದವು ಹೀಗೆ ಸಾರುತ್ತಿದೆ:—

> ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ
> ಮಾಧ್ವೀರ್ನಃ ಸಂತ್ವೋಷಧೀಃ ॥ ಮಧುನಕ್ತಮುತೋ
> ಷಸೀ ಮ ಧುಮತ್ಪಾರ್ಥಿವಂ ರಜಃ ॥ ಮಧುದ್ಯೌರಸ್ತು
> ನಃ ಪಿತಾ । ಮಧುಮಾನ್ನೋ ವನಸ್ಪತಿಃ ಮಧುಮಾನಸ್ತು
> ಸೂರ್ಯಃ ಮಾಧ್ವೀರ್ಗಾವೋ ಭವಂತು ನಃ ॥

--ಅಂದರೆ, ಧರ್ಮಾನುಸಾರಿಯಾದವನಿಗೆ ವಾತಾವರಣವು ತಿಳಿ (ಸಿಹಿ, ಹಿತಕರ)ಯಾಗುತ್ತದೆ; ನದಿಗಳು ಸ್ನೇಹಿತರಾಗುತ್ತವೆ; ಸಸ್ಯಗಳೂ,

ಹಗಲಿರುಳೂ, ಭೂಮ್ಯಂತರಿಕ್ಷಗಳೂ, ಸೂರ್ಯದೇವನೂ ಗೋಧನವೂ ಹಿತಕರಗಳಾಗುತ್ತವೆ.

ಭಾರತವು ಎತ್ತಿತೋರಿದ ಈ ಧರ್ಮ-ಸಂಸ್ಕೃತಿಯು ಇಹಜೀವನದ ಸುಂದರ ಸಮಗ್ರತೆಯನ್ನು ಪ್ರತಿಪಾದಿಸುವಂತಹದು; ಅದರಲ್ಲಿ ಆಯಾಸದ ಇಲ್ಲವೆ ನಿರಾಶೆಯ ಗಂಧಗಾಳಿಯೂ ಇಲ್ಲ! ಪ್ರಾಚೀನ ಕಾಲದಿಂದಲೂ ಅದು "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್‌ಶತಂ ಸಮಾಃ" (ಈಶೋಪನಿಷತ್).—ಕರ್ಮ ಮಾಡುತ್ತ ನೂರು ವರ್ಷ ಬದುಕತಕ್ಕದ್ದು—ಎಂದು ಎಚ್ಚರಿಸುತ್ತಲೇ ಬಂದಿದೆ. "ಶತಮಾನಂ ಭವತಿ ಪುರುಷಃ ಶತಾಯುಷ್ಯೇವೇಂದ್ರಿಯಃ ಪ್ರತಿತಿಷ್ಠತಿ". —ಯಾವ ಇಂದ್ರಿಯವೂ ತನ್ನ ಶಕ್ತಿಯನ್ನು ಕುಗ್ಗಿಸಿಕೊಳ್ಳದೆ, ಬಲಿಷ್ಠವಾಗಿ ನೂರು ವರ್ಷಕಾಲ ಆಯುಸ್ಸುಳ್ಳದಾಗಿರತಕ್ಕದ್ದು. ಇದು ಪುರೋಹಿತರು ಘೋಷಿಸುವ ಆಶೀರ್ವಚನ. ಸಾವಿರಾರು ವರ್ಷಗಳ ಹಿಂದಿನಿಂದಲೂ ಬಂದಿರುವ ಭಾರತೀಯ ಪುರಾಣಗಳಲ್ಲಿ, ಆಗಿನ ಕಾಲದ ಕೃಷಿ, ಕೈಗಾರಿಕೆ ಕಲೆಗಳ ವೈಭವಪೂರ್ಣವಾದ ವರ್ಣನೆಗಳೂ, ಜನರ ವೇಷಭೂಷಣಗಳ ವೈವಿಧ್ಯಗಳೂ, ಅವರ ಆಹಾರ ವಿಹಾರ ಭೋಗಾಡಂಬರಗಳೂ ಚಿತ್ರಿತವಾಗಿರುವುದನ್ನು ನೋಡಿದರೆ, ಪ್ರಾಚೀನ ಭಾರತೀಯರಲ್ಲಿದ್ದ ಜೀವನೋತ್ಸಾಹವೂ, ಸಾಹಸಪ್ರಿಯತೆಯೂ ನಮ್ಮನ್ನು ದಂಗುಬಡಿಸುವಂತಾಗುವುದು!

ಭಿನ್ನಭಿನ್ನವಾದ, ಆದರೂ ಅದದರ ಧರ್ಮಪ್ರವಾಹಕ್ಕೆ ತಕ್ಕುದಾದ ಕರ್ಮಮಾರ್ಗಗಳಿರುವುವು; ಅಂತೆಯೇ ಮನೋಬುದ್ಧಿವ್ಯವಸಾಯಗಳಲ್ಲಿಯೂ ಭಿನ್ನತೆಗಳುಂಟು. ಒಂದು ಯಂತ್ರಶಾಲೆಯಲ್ಲಿ ಅಥವಾ ಬಟ್ಟೆಗಿರಣಿಯಲ್ಲಿ ಒಬ್ಬೊಬ್ಬನು ಒಂದೊಂದು ವಸ್ತು ತಯಾರಿಸುತ್ತಾನಾದರೂ ಆಯೆಲ್ಲ ವಸ್ತುಗಳ ಸಂಯೋಜನೆಯಿಂದ ಒಂದು ಸಮಷ್ಟಿವಸ್ತು (ಧೋತ್ರ ಇಲ್ಲವೆ ಬೈಸಿಕಲ್) ತಯಾರಾಗುತ್ತದಲ್ಲವೆ? ಒಂದು ಮನೆಯನ್ನು ಕಟ್ಟಬೇಕಾದರೆ, ಗೌಂಡಿ, ಬಡಗಿ, ಕಮ್ಮಾರ ಮೊದಲಾದವರೆಲ್ಲರೂ ಬೇಕಲ್ಲವೆ? ಆ ಒಂದೊಂದು ವಸ್ತುವನ್ನಷ್ಟೇ ತಯಾರಿಸುವವನ ಬುದ್ಧಿಚಾತುರ್ಯವೂ ಕಲಾ ಕುಶಲತೆಯೂ ತಾನು ತಯಾರಿಸುವ ವಸ್ತುವಿನ ಮಟ್ಟಿಗೆ ಮಾತ್ರ ಸೀಮಿತವಾಗಿರುತ್ತದೆಂಬುದನ್ನು ಮರೆಯಬಾರದು. ಈ ಬುದ್ಧಿಚಾತುರ್ಯವೂ ಕಲಾಕುಶಲ

ತೆಯೂ ಕೆಲವುಟ್ಟಿಗೆ ಆನುವಂಶಿಕವಾಗಿಯೂ ಮತ್ತೆ ಕೆಲಮಟ್ಟಿಗೆ ಸ್ವಪ್ರಯತ್ನದ ಪರಿಣಾಮವಾಗಿಯೂ ಫಲಿಸುತ್ತವೆ. ಈ ಪ್ರಪಂಚದ ಜೀವಿತದಲ್ಲಿ, ಬುದ್ಧಿ ಚಾತುರ್ಯವೇ ಸುಖ ಸಂಪತ್ತಿಗೆಲ್ಲ ಒಂದು ಕಾಮಧೇನುವೆನಿಸುವಂತಿದೆ! ಇದಕ್ಕೆ ಜಗತ್ತಿನ ಇತಿಹಾಸದಿಂದಲೂ, ನಮ್ಮ ಸುತ್ತುಮುತ್ತಿನ ಸಮಾಜ ಜೀವನದಿಂದಲೂ ಅನೇಕಾನೇಕ ದೃಷ್ಟಾಂತಗಳನ್ನು ಕೊಡಬಹುದು. ನೀರು ಕುದಿವಾಗ ಉಗಿ ಏಳುತ್ತದೆಂಬುದನ್ನು ಎಲ್ಲರೂ ಬಲ್ಲರಾದರೂ ಜೇಮ್ಸ್‌ವಾಟ್ ಎಂಬವನು ಮಾತ್ರವೇ ಅದರ ಅದ್ಭುತ ಶಕ್ತಿಯನ್ನು ಗುರುತಿಸಿ, ಉಗಿಯಂತ್ರ (ರೈಲ್ವೆ ಇಂಜಿನ್ ಇತ್ಯಾದಿ)ದ ನಿರ್ಮಾಣಕ್ಕೆ ಕಾರಣನಾದನಲ್ಲವೆ? ಇದೇ ಮಾತನ್ನು ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿದ, ವಿಮಾನಗಳನ್ನು ತಯಾರಿಸಿದ, ರೇಡಿಯೋ ಯಂತ್ರಗಳನ್ನು ನಿರ್ಮಿಸಿದ ಮೇಧಾವಿಗಳಿಗೂ ಅನ್ವಯಿಸಿ ಹೇಳಬಹುದು. ದೊಡ್ಡ ದೊಡ್ಡ ನದಿಗಳಿದ್ದರೂ ಅವುಗಳ ದಡಗಳಲ್ಲಿರುವ ವಿಶಾಲ ಭೂಕ್ಷೇತ್ರಗಳು, ಮಳೆಯಿಲ್ಲದ್ದರಿಂದ ಬೀಳು ಬಿದ್ದಿರುತ್ತವೆ ಆದರೆ. ಬುದ್ಧಿಶಾಲಿಯಾದವನೊಬ್ಬನು ಆ ನದಿಗಳಿಗೆ ಒಡ್ಡುಕಟ್ಟಿ, ಜಲಾಶಯ ನಿರ್ಮಾಣ ಮಾಡಿ, ಕಾಲುವೆ ತೋಡಿಸಿ ಕೋಟ್ಯಂತರ ಎಕರೆ ಭೂಮಿಗಳಿಗೆ ನೀರೊದಗಿಸುವಂತೆ ಮಾಡುವದಿಲ್ಲವೆ? ಅನೇ ವರ್ಷ ಮಳೆ ಬರದಿದ್ದರೂ ಆ ಭೂಮಿಗಳು ವರ್ಷಂಪ್ರತಿ ನೀರುಂಡು ಸಮೃದ್ಧವಾದ ಬೆಳೆ ಕೊಡುವಂತಾಗುವುದಿಲ್ಲವೆ? ಇದು ದೊಡ್ಡ ದೊಡ್ಡ ಮೇಧಾವಿಗಳ ಮಾತಿನ್ನಿ; ನಮ್ಮ ಸುತ್ತುಮುತ್ತಿನ ಸಾಮಾನ್ಯ ಜನಸಮಾಜಗಳಲ್ಲಿಯೂ ಬುದ್ಧಿಚಾತುರ್ಯದ ತರತಮತೆಗಳ ವಿಭಿನ್ನತೆಯನ್ನು ಕಾಣಬಹುದು. ಒಬ್ಬನು ಒಂದು ಎಕರೆ ಜಮೀನಿನಲ್ಲಿ ಕೇವಲ ನೂರಿನ್ನೂರು ರೂಪಾಯಿ ಬೆಲೆಯ ದವಸಧಾನ್ಯಗಳನ್ನು ಬೆಳೆಸಿದ್ದರೆ, ಆತನಿಗಿಂತ ಚತುರನಾದ ಬೇರೊಬ್ಬನು ಅಷ್ಟೇ ಜಮೀನಿನಲ್ಲಿ ದ್ರಾಕ್ಷೆ-ದಾಳಿಂಬ ಮೊದಲಾದ ಹಣ್ಣುಗಳ ತೋಟ ಬೆಳೆಸಿ ಸಾವಿರಾರು ರೂಪಾಯಿ ಬೆಲೆಯ ಬೆಳೆ ಪಡೆಯುತ್ತಾನೆ! ಬುದ್ಧಿ ಚಾತುರ್ಯ (ಕಲಾಕುಶಲತೆ)ವು ಒಬ್ಬೊಬ್ಬನಲ್ಲಿ ಒಂದೊಂದು ತೆರನಾಗಿರುವುದಾದರೂ ಕರ್ಮಗಳು ಭಿನ್ನಭಿನ್ನವಾಗಿದ್ದರೂ, **ಮೂಲ ಮಾನವೀ ಧರ್ಮ** ಒಂದೇ. ಆ ಧರ್ಮದ ಮಟ್ಟಿಗೆ ಅವರೆಲ್ಲರೂ ಸಮಾನಸ್ಕಂದರು ಒಂದೆಡೆಯ ಮಣ್ಣಿನಲ್ಲಿ ಬಂಗಾರದ ಅದಿರು, ಮತ್ತೊಂದೆಡೆಯಲ್ಲಿ ವಜ್ರ, ತಾಮ್ರ,

ಸೀಸ— ಹೀಗೆ ಬೇರೆ ಬೇರೆ ಕಡೆಯ ಮಣ್ಣಿನಲ್ಲಿ ಬೇರೆ ಬೇರೆ ಲೋಹದ ಅದಿರು ದೊರೆಯುತ್ತದಾದರೂ, ಅವೆಲ್ಲವೂ ಮೂಲತಃ ಮಣ್ಣೆಂಬ ಸಮಾನ ಧರ್ಮ ಉಳ್ಳುದಾಗಿವೆಯಲ್ಲವೆ? "Birds of the same feather flock together" (ಒಂದೇ ಬಣ್ಣದ ಪಕ್ಕದ ಹಕ್ಕಿಗಳೆಲ್ಲಾ ಒಂದೆಡೆ ಗೂಡುವವು) ಎಂದಂತೆ ಆಯಾ ಅಭಿರುಚಿಗನುಗುಣವಾದ ಕರ್ಮಮಾರ್ಗ ಗಳನ್ನುಳ್ಳವರು **ತಮತಮದೇ** ಆದ ಒಂದೊಂದು ಸಮಾಜವನ್ನು ಮಾಡಿ ಕೊಂಡರೆನ್ನಬಹುದು; ಹಾಗೂ ತಮ್ಮತಮ್ಮೊಳಗೇ ಹೆಣ್ಣುಗಂಡುಗಳ ಕೊಡು ಕೊಳೆಯುಳ್ಳವರಾಗಿ, ಒಂದೊಂದು **ಜಾತಿ**ಯಾಗಿ ಬದುಕುತ್ತ ಬಂದರು. ಅಂತಹ ವಿವಿಧ ಜಾತಿ, ಧರ್ಮ, ಕರ್ಮಗಳ ವಿವಿಧ ಸಮಾಜಗಳು ಒಟ್ಟಾಗಿ ಬಾಳುವ 'ಸಹಜೀವನ'ಕ್ಕೆ ಆಂಗ್ಲದಲ್ಲಿ 'Co-existence' ಎಂದು ಕರೆಯು ಲಾಗುತ್ತಿದೆ. "ಸಹನಾವವತು, ಸಹನೌಭುನಕ್ತು, ಸಹವೀರ್ಯಂಕರವಾವಹೈ" ಎಂಬಿವೇ ಮೊದಲಾದ ಔಪನಿಷದಿಕ ವಾಣಿಗಳು ಈ ಸಹಜೀವನದ ಮೂಲ ವಾಣಿಗಳಾಗಿವೆ.

## ವಿಶ್ವಮಾನವತೆ

ಗ್ರಹತಾರಾ ನಕ್ಷತ್ರಗಳು ಸಹಜೀವನ ಮಂತ್ರದ ಅಮರ ವ್ಯಾಖ್ಯೆ ಗಳಾಗಿವೆ. ಅವುಗಳು ತಂತಮ್ಮ ನಿಯತಿಪಥದಲ್ಲೇ ನಡೆಯುತ್ತ, ಸರ್ವ ವಿಶ್ವವನ್ನೂ ಸಹಜೀವನದ ಹೊಂಬೆಳಕಿನಿಂದ ಪುಲಕಿತಗೊಳಿಸುತ್ತಿವೆ. ಇಂದಿನ ಪ್ರಪಂಚದಲ್ಲಿ ಭಿನ್ನಭಿನ್ನ ಧ್ಯೇಯ-ಧೋರಣೆ-ಕಾರ್ಯಕ್ರಮಗಳ ವಿವಿಧ ರಾಷ್ಟ್ರಗಳು ಪರಸ್ಪರ ಘರ್ಷಣೆ ಇಲ್ಲದೇ ಬಾಳಿ ಬದುಕಿ, **ವಿಶ್ವಮಾನವ ಸಮಾಜ**ವಾಗಬೇಕಾದರೆ **ಸಹಜೀವನ**ವೊಂದೇ ಹೆದ್ದಾರಿ ಹಿಂದುಸ್ಥಾನಕ್ಕೆ ಪುರಾಣಪ್ರೋಕ್ತವಾಗಿ ಸಾಗಿಬಂದ ಅನೇಕ ಲಕ್ಷ ವರ್ಷಗಳ ಹಳೆಯ ಇತಿಹಾಸವಿದೆ. ಬಗೆಬಗೆಯ ಜನಸಮಾಜಗಳೂ, ಸಂಸ್ಕೃತಿ–ನಾಗರಿಕತೆಗಳೂ ಇಲ್ಲಿ ಬೀಜ ವೃಕ್ಷನ್ಯಾಯದಂತೆ ಹುಟ್ಟುತ್ತಲೂ, ಸಾಯುತ್ತಲೂ, ಮತ್ತೆ ಹುಟ್ಟುತ್ತಲೂ ಹೋಗಿವೆ. ಚಳಿಗಾಲದಲ್ಲಿ ಹಳೆಯ ಹಣ್ಣೆಲೆ ಉದುರಿ ಬೋಳಾಗಿ ನಿಂತ ರೆಂಬೆ–ಕೊಂಬೆಗಳು, ವಸಂತಾಗಮದಲ್ಲಿ ಪುನಃ ಮನೋಜ್ಞವಾದ ಎಳೆತಳಿರುಗಳನ್ನು ಹೇರಿಕೊಂಡು ಮೆರೆಯುವಂತೆ, ಈ

ದೇಶದ ಧರ್ಮ-ಸಂಸ್ಕೃತಿಯು ಸನಾತನತೆ ಇದೆ. ಹೀಗೆ ಸನಾತನವಾದರೂ ವಿನೂತನವಾಗಿ ಮುನ್ನಡೆಯುತ್ತಿರುವುದಕ್ಕೆ, ಇದು ಕಲಿತು, ಆಚರಿಸಿ, ಅರಗಿಸಿಕೊಂಡು ಬಂದ 'ಸಹಜೀವನ' ತತ್ತ್ವವೇ ಕಾರಣವಾಗಿದೆ.

## ಸಹಜೀವನ ಪ್ರಯೋಗಶಾಲೆ— ಹಳ್ಳಿ

ಭಾರತದ 'ಸಹಜೀವನ' ತತ್ತ್ವದ ಪಾಠಶಾಲೆ ಅಥವಾ ಪ್ರಯೋಗಶಾಲೆಯೆಂದರೆ ಹಳ್ಳಿ. ಹಳ್ಳಿಯ ರಚನೆಯೂ, ವಿವಿಧ ಸಮಾಜಗಳ, ಜಾತಿಗಳ ಮತ್ತು ಕಸಬು-ಕೈಗಾರಿಕೆಗಳ ಒಡ್ಡಣೆಗಳೂ ಸಹಜೀವನದ ಮೇಲೆಯೇ ನಿಂತಿವೆ. ವರ್ಣಾಶ್ರಮಗಳ ವ್ಯವಸ್ಥೆಯು ಸಹಜೀವನದ ಅತ್ಯಂತ ಸುಸಂಸ್ಕೃತ ಸ್ವರೂಪವೆನ್ನಬಹುದು. ಯಾವ ವರ್ಣವೂ ನಾಶವಾಗಬಾರದು, ಯಾವ ಆಶ್ರಮವೂ ಕೆಡಬಾರದು; ಅವೆಲ್ಲವೂ ಒಂದಕ್ಕೊಂದು ಪೂರಕವಾಗಿ ಸಮಾಜದ ಸಮಗ್ರತೆಯು ಒಂದು ವೈಭವದೃಶ್ಯದಂತಿರಬೇಕು. ದೇಹದ ಸರ್ವ ಅಂಗಾಂಗಗಳೂ ಒಟ್ಟಾಗಿ ಇಡೀ ದೇಹದ ಸುಖ-ಸಂತೋಷಗಳಿಗೆ ಕಾರಣವಾಗುವಂತೆ ಸಕಲ ಸಮಾಜಗಳೂ, ಸಕಲ ವೃತ್ತಿ-ವ್ಯವಸಾಯಗಳೂ ತಮ್ಮ ತಮ್ಮ ಒಲವು-ನಿಲವುಗಳನ್ನು ಕಾಪಾಡಿಕೊಂಡು, ತಮ್ಮ ತಮ್ಮ ಕರ್ತವ್ಯ ಕರ್ಮವನ್ನು ಮಾಡುತ್ತ ಹೋಗಬೇಕು. ಇದೇ ಸಹಜೀವನದ ತಂತ್ರ Technique. ನಮ್ಮ ಹಳ್ಳಿಗಳ ರಚನೆಯೂ ಹಾಗಿದ್ದಿತು. ಊರ ನಡುವೆ ದೇವಾಲಯ, ಪಾಠಶಾಲೆ, ತಟಾಕ; ಅವುಗಳ ಅಕ್ಕಪಕ್ಕದಲ್ಲಿ ಅರ್ಚಕರ ಮನೆಗಳು, ಆ ಮೇಲೆ ಅಂಗಡಿ ಬೀದಿ, ವಿವಿಧ ಕಸಬುಕೈಗಾರಿಕೆಗಳ ಕೇರಿಗಳು; ಕೃಷಿಕ್ಷೇತ್ರಗಳು; ಹುಲ್ಗಾವಲುಗಳು, ಹೊಲಗದ್ದೆ, ಗರಡಿಮನೆ. ಊರ ಜಾತ್ರೆ ಅಥವಾ ಸಂತೆ ಬಂತೆಂದರೆ, ಎಲ್ಲ ಬಗೆಯ ಜನರೂ ಒಂದೆಡೆ ಕಲೆತು, ಆನಂದದಿಂದಲೇ ವ್ಯವಹರಿಸುವರು; ಹಾಗೂ ಜಾತ್ರೆಗೂ, ಸಂತೆಗೂ ಒಂದುಬಗೆಯ ಸಮಗ್ರತೆಯನ್ನೂ ಶೋಭೆಯನ್ನೂ ಉಂಟುಮಾಡುವರು. ಮೇಲು-ಕೀಳೆಂಬ ಭಾವನೆ ಇಟ್ಟುಕೊಳ್ಳದೆ ಸರ್ವರೂ ತಮ್ಮ ತಮ್ಮ ಆನುವಂಶಿಕ ಶೀಲ-ಸ್ವಭಾವಗಳಿಗನುಗುಣವಾದ ವೃತ್ತಿ-ವ್ಯವಸಾಯಗಳನ್ನು ನಡೆಸಿಕೊಂಡು, ಸುಖಸಂಪತ್ ಸಮೃದ್ಧಿಗಳನ್ನು ಗಳಿಸಿಕೊಳ್ಳುತ್ತಿದ್ದರು. ಈ ಬಗೆಯ ಸಹಜೀವನದ

ಜಾತಿವ್ಯವಸ್ಥೆಯ ಕುರಿತು ಗಾಂಧೀಜಿಯವರಿಟ್ಟುಕೊಂಡಿದ್ದ ಭಾವನೆಯು ಎತ್ತಿಹೇಳುವಷ್ಟು ಚಿತ್ತವೇಧಕವಾಗಿದೆ: —

"The Caste system is not based on inequality, there is no question of inferiority, and so far as there is any such question arising, as in Madras, Maharastra or elsewhere, the tendency should undoubtedly be checked. But there appears to be no valid reason for ending the-system because of its abuses. It lends itself easily to reformation. The spiirit of democracy, which is fast spreading through out India and the rest of the world, will without a shadow of doubt, purge the institution of the idea of predominance and subordination."

—ಯಂಗ್ ಇಂಡಿಯಾ ೮-೧೨-೧೯೨೦

(ಅರ್ಥ:— ವರ್ಣ (ಜಾತಿ) ಪದ್ಧತಿಯು ಅಸಮಾನತೆಯ ಮೇಲೆ ರಚಿತವಾಗಿಲ್ಲ. ಅದರಲ್ಲಿ ಮೇಲು-ಕೀಳು ಪ್ರಶ್ನೆಯೇ ಇಲ್ಲ. ಮದ್ರಾಸು, ಮಹಾರಾಷ್ಟ್ರಗಳಲ್ಲಿ ತಲೆಯೆತ್ತಿದಂತೆ ಮತ್ತೆಲ್ಲಿಯೇ ಆದರೂ (ವರ್ಣಾಶ್ರಮದಲ್ಲಿ ಮೇಲು-ಕೀಳು ಭಾವನೆ ಉಂಟೆಂಬ ಈ ಪ್ರಶ್ನೆ ತಲೆಯೆತ್ತಿದರೆ, ಅದನ್ನು ಅತ್ಯಗತ್ಯವಾಗಿ ಇದಿರಿಸಬೇಕು. ವರ್ಣಾಶ್ರಮ ಪದ್ಧತಿಯಲ್ಲಿ ಮೇಲು-ಕೀಳು ಭಾವನೆಯು ದೋಷವನ್ನು ತಂದೊಡ್ಡಿದ್ದರೆ, ಆ ದೋಷವನ್ನು ಕಿತ್ತೆಸೆಯಬೇಕೇ ಹೊರತು ವರ್ಣಪದ್ಧತಿಯನ್ನಲ್ಲ. ವರ್ಣಪದ್ಧತಿಯು ಸುಧಾರಣೆಗೆ ಒಗ್ಗಿಕೊಳ್ಳುತ್ತದೆ. ಭಾರತದಲ್ಲಿಯೂ, ಉಳಿದ ಜಗತ್ತಿನಲ್ಲಿಯೂ ಹಬ್ಬುತ್ತಿರುವ ಪ್ರಜಾಸತ್ತೆಯ ಭಾವನೆಯು ಈ ವರ್ಣಪದ್ಧತಿಯಲ್ಲಿ ಕಂಡುಬರಬಹುದಾದ ಮೇಲು-ಕೀಳು ಭಾವನೆಯ ದೋಷವನ್ನು ಉಚ್ಚಾಟನೆ ಮಾಡದೇ ಬಿಡದು-)

ಭಾರತವು ಸ್ವಾತಂತ್ರ್ಯವನ್ನು ಕಳೆದುಕೊಂಡು, ಪರಧರ್ಮೀಯರ ಆಳಿಕೆಗೆ ಒಳಪಟ್ಟಂದಿನಿಂದ, ವರ್ಣಪದ್ಧತಿಯಲ್ಲಿ— ಆಳುವವರ ಭೇದ ನೀತಿಯಿಂದ ವ್ಯಕ್ತಾವ್ಯಕ್ತವಾಗಿ— ಕಶ್ಮಲದ ಬೀಜವು ಬಿತ್ತಲ್ಪಟ್ಟಿತು. ಬಡತನ, ನಿರುದ್ಯೋಗ, ದೈಹಿಕ ದೌರ್ಬಲ್ಯಗಳು ಹೆಚ್ಚುತ್ತ ಹೋದಂತೆ, ಹಣಕಾಸಿಗಾಗಿ, ನೌಕರಿಗಳಿಗಾಗಿ, ಲೌಕಿಕ ಕೀರ್ತಿಗಾಗಿ ಸಮಾಜ–ಸಮಾಜಗಳೊಳಗೆ

ತುಂಬಿ ತುಳುಕುತ್ತಿದ್ದವು. ಅದರ ಪರಿಣಾಮವಾಗಿ ಪ್ರತಿಯೊಂದು ಹಳ್ಳಿಯೂ ಒಂದು ಚಿಕ್ಕ ಜನಭರಿತ ಉದ್ಯೋಗಶಾಲೆಯಂತೆ ಉಲ್ಲಾಸದಿಂದ ತುಂಬಿ, ಸ್ವಾವಲಂಬಿಯಾಗಿದ್ದಿತು. ಸುಪ್ರಸಿದ್ಧ ಆಂಗ್ಲೇಯ 'ಘಟನಾಶಾಸ್ತ್ರ ಪಂಡಿತ' ಮೆಯಿನ್ ಅವರು ಭಾರತೀಯ 'ಗ್ರಾಮಸಮಾಜ'ದ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯವನ್ನಿಲ್ಲಿ ಎತ್ತಿ ಹೇಳಬೇಕಾಗಿದೆ:

"The Indian village community was an organised, self-acting body. It included nearly complete establishment of occupations and trades for enabling it to continue its collective life without assistance from any person or body external to it."

( ಅರ್ಥ:— ಭಾರತದ ಗ್ರಾಮಸಮಾಜವು ಸುವ್ಯವಸ್ಥಿತವೂ, ಸ್ವಯಂ ಸ್ಫೂರ್ತಿ ಚಾಲಿತವೂ ಆಗಿದ್ದಿತು. ಪ್ರತಿಯೊಂದು ಗ್ರಾಮವೂ ಹೊರಗಿನ ಯಾವ ವ್ಯಕ್ತಿಯ ಅಥವಾ ಸಂಸ್ಥೆಯ ಅವಲಂಬನವಿಲ್ಲದೆ, ತನ್ನ ಎಲ್ಲ ವೃತ್ತಿ, ವ್ಯವಸಾಯಗಳನ್ನು ತಾನೇ ಸಾಗಿಸಿಕೊಂಡು, ಒಂದು ಸಮಗ್ರ, ಸ್ವತಂತ್ರ ಸಮಾಜದ ಘಟಕವಾಗಿದ್ದಿತು. )

ಮೆಯಿನ್ ಅವರು ವ್ಯಕ್ತಪಡಿಸಿದಂತೆ ಭಾರತದ ಗ್ರಾಮಘಟಕವು ಒಂದು ಸ್ವತಂತ್ರವಾದ ಸಣ್ಣ ಪ್ರಜಾರಾಜ್ಯವೇ ಆಗಿದ್ದಿತು. ದಕ್ಷಿಣ ಭಾರತದ ದ್ರಾವಿಡ ಭಾಷಾ ವ್ಯಾಕರಣಗಳ ಮತ್ತು ಜನಜೀವನದ ಕುರಿತು ದೀರ್ಘಾವಧಿ ವ್ಯಾಸಂಗಮಾಡಿ ಗ್ರಂಥ ರಚಿಸಿದ್ದ ಬಿಶಪ್ ಕಾಲ್ಡ್‌ವೆಲ್ ಅವರು ತಮ್ಮ ಗ್ರಂಥದ ಪೀಠಿಕೆಯಲ್ಲಿ ಭಾರತ ಗ್ರಾಮಜೀವನದ ಕುರಿತು ಹೀಗೆ ಹೇಳಿದ್ದಾರೆ: —

"The Indian village may be regarded as the most permanent institution and the self-sufficiency and the corporate life of the Village republic is the greatest heritage of the nation"

ಅರ್ಥ:— ಭಾರತದ ಗ್ರಾಮ (ಹಳ್ಳಿ)ವು ಅತ್ಯಂತ ಸ್ಥಿರವಾದ ಒಂದು ಸಂಸ್ಥೆಯಾಗಿದ್ದಿತೆನ್ನಬಹುದು; ಹಾಗೂ ಈ ಗ್ರಾಮಪ್ರಜಾರಾಜ್ಯದ ಸಾಂಘಿಕ ಸ್ವಾವಲಂಬೀ ಜೀವನಪದ್ಧತಿಯು ಭಾರತ ಜನಾಂಗದ ಅತ್ಯಮೂಲ್ಯವಾದ ಆನುವಂಶಿಕ ಸಂಪತ್ತಾಗಿದೆ.)

ವೈದಿಕ ಯುಗದಲ್ಲಿ ಮತ್ತು ತರುವಾಯದ ಐತಿಹಾಸಿಕ (ಹಿಂದೂ-ಬೌದ್ಧ) ಕಾಲಗಳಲ್ಲಿ ಭಾರತವು 'ಗಣರಾಜ್ಯ' ವಾಗಿದ್ದು, ಹಳ್ಳಿಗಳೇ ಮೂಲ ಘಟಕಗಳಾಗಿದ್ದುವು.* ಮೌರ್ಯ ಚಂದ್ರಗುಪ್ತನ ಕಾಲದಲ್ಲಂತೂ, ಹಳ್ಳಿಗಳ ಕುಶಲ ಕಲಾ ಕೈಗಾರಿಕೆಗಳ 'ಕಸಬುದಾರ' ರ ಬಗೆಗೆ ವಿಶೇಷ ರಕ್ಷಣೆಗಳು ಕೊಡಲ್ಪಟ್ಟಿದ್ದು, ಅವರ ಕೈಗಾರಿಕೆಗೆ ಧಕ್ಕೆಯುಂಟುಮಾಡುವವರಿಗೆ ಮರಣ ದಂಡನೆ ಮಾಡತಕ್ಕದ್ದೆಂಬ ಶಾಸನವು ಕೂಡಾ ಇದ್ದಿತು. ಭಾರತದ ಮೇಲೆ ದಾಳಿಗೈದು ಭಾರತದ ಸಾರ್ವಭೌಮ ಸಿಂಹಾಸನವನ್ನೇರಿದ ಮುಸಲ್ಮಾನರ ಆಳಿಕೆಯಲ್ಲಿಯೂ ಗ್ರಾಮದ ಸಾಂಘಿಕ ಜೀವನ ಪದ್ಧತಿಯು ರಕ್ಷಿಸಲ್ಪಟ್ಟಿತೇ ಹೊರತು, ಅದಕ್ಕೆ ಹಾನಿತಟ್ಟಲಿಲ್ಲ. ಮೊಗಲ ಬಾದಶಹರ ನಾಲ್ಕು ಶತಮಾನದಷ್ಟು ದೀರ್ಘಾವಧಿ ರಾಜ್ಯಭಾರದಲ್ಲಿ ಹಳ್ಳಿಗಳ ಕುಶಲ ಕಲಾ ಕೈಗಾರಿಕೆಗಳಿಗೆ ವಿಶೇಷವಾದ ಪ್ರೋತ್ಸಾಹವೂ, ಆಸ್ಥಾನ ಗೌರವಗಳೂ ದೊರೆಯುತ್ತಿದ್ದುವು; ಹಾಗೂ ಗ್ರಾಮಘಟಕದ ಆನುವಂಶಿಕ ಸಂಘಟನೆಯು ತುಸುವಾದರೂ ಹಾಳಾಗದಂತೆ ಜಾಗರೂಕತೆಯಿಂದ ರಕ್ಷಿಸಲ್ಪಡುತ್ತಿದ್ದಿತು. ಭಾರತವನ್ನು ಗೆದ್ದು, ಆಳುತ್ತ ಬಂದ ಮುಸಲ್ಮಾನರು ಭಾರತಜನಾಂಗ ದೊಡನೆ ಸಮರಸವಾಗಿ ಬೆರತದ್ದರಿಂದಲೇ ಅವರು ಪ್ರಾಚೀನ ಪರಂಪರೆಯ ಗ್ರಾಮಘಟಕತ್ವಕ್ಕೆ ಧಕ್ಕೆತರಲಿಲ್ಲ—ಎನ್ನಬಹುದು. ಭಾರತದ ವಿಪುಲವಾದ ಸಂಪತ್ತು ಭಾರತದ ಹೊರಗೆ ಹೋಗದೇ, ಭಾರತದಲ್ಲೇ ಉಳಿಯುವಂತಾಯಿತು. ಅದರ ಪರಿಣಾಮವಾಗಿ ಭಾರತದ ಹಳ್ಳಿಗಳು ಇಡೀ ರಾಷ್ಟ್ರದ ಸಂಪತ್ತಿನ ಅಕ್ಷಯ ಭಂಡಾರಗಳಾಗಿ ಉಳಿದುವು.

ಆದರೆ, ಈ ಪರಿಸ್ಥಿತಿಯು ಮೊಗಲಸಾಮ್ರಾಜ್ಯದ ಪತನಾನಂತರ ಕ್ಷಿಪ್ರದಲ್ಲಿಯೇ ಪರಿವರ್ತನ ಹೊಂದುವಂತಹ ಸನ್ನಿವೇಶವು ಪ್ರಾಪ್ತವಾಯಿತು. ಐರೋಪ್ಯ ರಾಷ್ಟ್ರಗಳ—ಮುಖ್ಯವಾಗಿ ಡಚ್ಚರು, ಆಂಗ್ಲರು

* ಕೌಟಿಲ್ಯನ ಅರ್ಥಶಾಸ್ತ್ರ.

ಸಾಹಸಪ್ರಿಯರಾದ ಫ್ರೆಂಚರು— ವ್ಯಾಪಾರಿಗಳು ತಂಡೋಪತಂಡವಾಗಿ ಪೌರಸ್ತ್ಯ ರಾಷ್ಟ್ರಗಳಿಗೆ ಬಂದು, ಇಲ್ಲಿಯ ಸಿಕ್ಕಾಪಟ್ಟೆ ನೈಸರ್ಗಿಕ ಸಂಪತ್ತಿನ ಹಾಗೂ ಕಲಾ ಕೈಗಾರಿಕೆಗಳ ಮತ್ತು ಬಡಜನಗಳ ಕ್ರಮಬದ್ಧವಾದ ಶೋಷಣೆಯನ್ನಾರಂಭಿಸಿದರು! ೧೮ ಮತ್ತು ೧೯ನೆಯ ಶತಮಾನಗಳು ಭಾರತದ ಸಾರ್ವಾಂಗಿಕ ಅಧಃಪತನದ ಕಾಳರಾತ್ರಿಯಾಗಿ ಪರಿಣಮಿಸಿತು ವ್ಯಾಪಾರಕ್ಕಾಗಿ ಬಂದ ಆಂಗ್ಲರೂ, ಫ್ರೆಂಚರೂ, ಮೊಗಲಸಾಮ್ರಾಜ್ಯದ ಅಧಃಪತನದ ಮುಚ್ಚಂಜೆಯ ಸಂಧಿಯಲ್ಲಿ ಕಗ್ಗತ್ತಲೆಯಂತೆ ಇಡೀ ರಾಷ್ಟ್ರವನ್ನೇ ವ್ಯಾಪಿಸಿ, ರಾಜಕೀಯ ಅಧಿಕಾರವನ್ನು ಸ್ಥಾಪಿಸಿಕೊಂಡರು. ಆಗಿನ ಕಾಲದ ಹಿಂದುಸ್ಥಾನದ ರಾಜಕೀಯವಂತೂ, ಪ್ರಬಲವಾದ ಕೇಂದ್ರ ಸರಕಾರವಿಲ್ಲದೆ, ಯಜಮಾನನಿಲ್ಲದ ಮನೆಯಂತೆ, "ಬಲಾಢ ಪೃಥ್ವೀ" ಧೋರಣದ ರಣಕಣದ ರೂಪತಾಳಿತ್ತು. ಅಲ್ಲಲ್ಲಿ ಸಣ್ಣಪುಟ್ಟ ಸಂಸ್ಥಾನಗಳೂ, ಪಾಳೆಯಗಾರಿಕೆಗಳೂ, ಸುಭೇದಾರಿ-ತಾಲೂಕುದಾರಿಗಳೂ ತಲೆಯೆತ್ತಿ, ಪರಸ್ಪರ ಹೊಯ್ದಾಟಕ್ಕಣಿಯಾಗಿದ್ದುವು.* ಆಂಗ್ಲವ್ಯಾಪಾರಿಗಳು ಇದರ ದುರ್ಲಾಭಪಡೆದು- ಇಬ್ಬರನ್ಯಾಯ, ಮೂರನೆಯವನ ಆಯವಾದಂತೆ— ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಂಡರು. ತಮ್ಮ ರಾಜಕೀಯ ಅಧಿಕಾರವನ್ನವರು ಸಾವಿರಾರು ಮೈಲು ದೂರದ ತಮ್ಮ ಮಾತೃದೇಶದ ಸಂಪದಭಿವೃದ್ಧಿ ಮಾಡಿಕೊಳ್ಳುವುದಕ್ಕಾಗಿಯೇ ಉಪಯೋಗಿಸಿಕೊಂಡರು. ಭಾರತದ ಸರ್ವಸಂಪತ್ತಿಗೂ ಮೂಲಸ್ಥಾನಗಳಾದ ಹಳ್ಳಿಗಳನ್ನೂ ಹಳ್ಳಿಯ ವಿವಿಧ ಕುಶಲ ಕಲಾ ಕೈಗಾರಿಕೆಗಳನ್ನೂ ಅವರು ನಿಷ್ಕರುಣೆಯಿಂದ ಶೋಷಿಸಿದರು. ಪ್ರಸಿದ್ಧ ಇತಿಹಾಸಜ್ಞ ವಿ. ತೀಕುಮಲ್ ಅವರು ತಮ್ಮ "Cottage Industries Of India" ಗ್ರಂಥದಲ್ಲಿ ಇದರ ಸವಿಸ್ತೃತ ವರ್ಣನೆಮಾಡಿ ಈ ರೀತಿ ಸಿದ್ಧಾಂತಿಸಿದ್ದಾರೆ.

* Intercourse with the West has been on the whole unhappy and in many cases disastrous to India's high spiritual ideals and superior cultaral life and ancient heritage."

—*O. C. Ganguly*

"The story of the decadence of Indian rural life is probably the worst tragedy of human act. Its principal actors were the Britishers The ill taste and thirst for commercial gain of the British trader killed the artistic outlook of the Indian craftsman, while the jealous and hostile attitude of the British producer intimidated him. Who does not know the sad episode of the cutting off the thumb of the many a poor weaver of Bangal ? What a sad contrast to the protection he enjoyed under his Indian rulers! The craftsman had begun to groan under foreign oppression! He could only look to the middle classes for patronage, now that the old ruling houses have disappeared. The middle classes gave a cold response since their tastes had undergone some change under foreign influence"

ಅರ್ಥ:— ಭಾರತೀಯ ಗ್ರಾಮಜೀವನದ ಅಧಃಪತನದ ಕತೆಯು ಮಾನವೇತಿಹಾಸದ ಒಂದು ಭೀಕರ ದುರಂತ ಅಂಕದಂತಿದೆ. ಅದರ ಮುಖ್ಯ ಪಾತ್ರಧಾರಿಗಳು ಬ್ರಿಟಿಶರು! ಅವರ ಕೀಳು ಅಭಿರುಚಿ ಮತ್ತು ವ್ಯಾಪಾರೀ ಲಾಭ ತೃಷ್ಣೆಯು ಭಾರತೀಯ ಕಲಾಕಾರರ ಕಲಾತ್ಮಕ ದೃಷ್ಟಿಯನ್ನು ನಾಶಮಾಡಿತು, ಹಾಗೂ ಬ್ರಿಟಿಷ ಉದ್ದಿಮೆದಾರರು ಇಲ್ಲಿಯ ಆಂಗ್ಲ ಸರಕಾರದ ಮೇಲೆ ವರ್ಚಸ್ಸು ಹಾಕಿ, ತಮ್ಮ ಸ್ಪರ್ಧೆಯನ್ನು ಬಲಗೊಳಿಸಿಕೊಂಡರು. ಬಂಗಾಳದ ನೇಕಾರರ ಹೆಬ್ಬೆರಳುಗಳನ್ನು ಕಡಿಸಿಹಾಕಿದ ದುಃಖದಾಯಕ ವೃತ್ತಾಂತ ಯಾರಿಗೆ ಗೊತ್ತಿಲ್ಲ? ಕೈಗಾರಿಕೆಯಲ್ಲಿ ತೊಡಗಿದ್ದ ಆ ಜನರಿಗೆ ತಮ್ಮ ದೇಶೀ ಸರಕಾರದಿಂದ ದೊರೆತಿದ್ದ ರಕ್ಷಣೆಗೂ ಇದಕ್ಕೂ ಎಷ್ಟು ವಿಪರ್ಯಸ್ತ ಅಂತರ! ವಿದೇಶೀಯರ ಆಳಿಕೆಯ ಭಾರದಿಂದ ಭಾರತೀಯ ಕುಶಲ ಕಲಾಕಾರರು ನರಳುವಂತಾಯಿತು. ಹಿಂದೆ ಆಶ್ರಯವೀಯುತ್ತಿದ್ದ ದೊಡ್ಡ ದೊಡ್ಡ ಆಸ್ಥಾನಗಳೂ ಮನೆತನಗಳೂ ಈಗ ಕಣ್ಮರೆಯಾದ್ದರಿಂದ ಅವರು ತಮ್ಮ ಕೈಗಾರಿಕೆಯ ವಸ್ತುಗಳ ಪ್ರೋತ್ಸಾಹನಕ್ಕಾಗಿ ಮಧ್ಯಮವರ್ಗದ ಜನರ ಕಡೆ ನೋಡಬೇಕಾಯಿತು. ಆದರೆ? ಈ ಮಧ್ಯಮವರ್ಗದ ಜನರು ಪಾಶ್ಚಾತ್ಯರ ರೀತಿನೀತಿಗಳನ್ನು ಅನುಸರಿಸಿದ್ದರಿಂದ, ಅವರ ಅಭಿರುಚಿಯಲ್ಲಿಯೂ ಬದಲಾವಣೆಯಾಗಿ ಬಿಟ್ಟಿದ್ದಿತು!)

ಸಾವಿರ ವರ್ಷದ ದೀರ್ಘಾವಧಿಯಲ್ಲಿ ಆಗಿರದಷ್ಟು ಭಯಾನಕ

ಬದಲಾವಣೆ ಕೇವಲ ಎರಡೇ ಎರಡು ಶತಮಾನಗಳಲ್ಲಿ ಆಗಿಬಿಟ್ಟಿತು! ಹಳ್ಳಿಗಳಲ್ಲಿದ್ದ ಧಾರ್ಮಿಕ-ನೈತಿಕ ಸಹಜೀವನ ಸಮಾಜಪದ್ಧತಿಯು ವಿಸ್ಖಲಿತವಾಯಿತು; ಜನತೆಯು ಚಿತ್ತಶಾಂತಿಯು ಕದಡಿಹೋಯಿತು. ಬಗೆಬಗೆಯ ಕಲೆ ಕೈಗಾರಿಕೆಗಳು ಹಾಳ್ಬಿದ್ದುವು; ಗುಡಿ-ಗೋಪುರದೇವಾಲಯ-ತಟಾಕಗಳು ಶಿಥಿಲಗೊಂಡು ರುದ್ರಭೂಮಿಯ 'ಗೋರಿ' ಗಳಂತೆ ಐತಿಹಾಸಿಕ ಸ್ಮಾರಕಗಳಾಗುಳಿದವು. ಭಾರತದ ಹಳ್ಳಿಗಳು ಪರಪ್ರಾಂತಗಳ ಪಟ್ಟಣಗಳ ಮತ್ತು ಪರದೇಶಗಳ ಕಾರಖಾನೆಗಳಿಗೆ ಕಚ್ಚಾ ಮಾಲುಗಳನ್ನು ಪೂರೈಸುವ ಕೇಂದ್ರಬಿಂದುಗಳಾದುವು. ಉದ್ಯೋಗಶಾಲೆಗಳಂತೆ ಉತ್ಸಾಹಭರಿತವಾಗಿದ್ದ ಹಳ್ಳಿಗಳು ಶಚ್ಚಾಟದ ಕಣಗಳಾದುವು. ಇದಕ್ಕೆ, ಜನತೆಯಲ್ಲಿ ಹಬ್ಬಿಹೋದ ನಿರುದ್ಯೋಗವೂ, ದಾರಿದ್ರ್ಯವೂ ಮುಖ್ಯ ಕಾರಣವಾಗಿ ಬಿಟ್ಟವು. ಈ ಶತಮಾನದ ಆದಿಯಲ್ಲಂತೂ ಭಾರತದ ಗ್ರಾಮಜೀವನವು ಸಂಪೂರ್ಣ ಕಳೆಗುಂದಿದಂತಾಗಿ, ಅರುಣೋದಯವನ್ನು ನಿರೀಕ್ಷಿಸುವ ಕೊನೆಯ ಜಾವದ ಕಗ್ಗತ್ತಲೆಯಂತೆ, ಒಂದುಬಗೆಯ ಅಶಾಂತತೆಯಿಂದ ಕುದಿಯುವಂತಿತ್ತು. ತಳಹದಿಯೇ ಕೆಟ್ಟುಹೋದಾಗ, ಅದರ ಮೇಲಣ ಕಟ್ಟಡವು ಭದ್ರವಾಗಿ ಉಳಿಯುವುದಾದರೂ ಹೇಗೆ ಸಾಧ್ಯ?

ಮಹಾತ್ಮಾಜಿಯವರು ಇದನ್ನು ಸೂಕ್ಷ್ಮವಾಗಿ ತಿಳಿದವರಾಗಿ ಹಳ್ಳಿಯನ್ನೇ ತಮ್ಮ ಕಲ್ಪನೆಯ ರಾಮರಾಜ್ಯದ ಮೂಲಘಟಕವಾಗಿಟ್ಟುಕೊಂಡರು. ಹಳ್ಳಿಗಳಲ್ಲಿ ಐಕ್ಯಭಾವನೆಯೂ ಶಾಂತತೆಯೂ ನೆಲಸಬೇಕು; ಅದಕ್ಕೆ ಉದ್ಯೋಗ-ಧಂದೆಗಳು ಪುನರುಜ್ಜೀವನಗೊಳ್ಳಬೇಕು, ಸ್ವಾವಲಂಬನ ಬುದ್ಧಿ ಬೆಳೆಯಬೇಕು—ಎಂದು ಅವರು ವಿಧಾಯಕ ಕಾರ್ಯಕ್ರಮಗಳನ್ನೇ ತಮ್ಮ ರಾಜಕಾರಣವಾಗಿ ರೂಪಿಸತೊಡಗಿದರು. ಜಾತಿಮತ ತಾರತಮ್ಯ ನಿರ್ಮೂಲನೆ, ಅಸ್ಪೃಶ್ಯತಾ ನಿವಾರಣೆ, ಸ್ವದೇಶೀ ವಸ್ತುಗಳ ಪ್ರಚಾರ, ಮದ್ಯಪಾನ ನಿಷೇಧ, ಗ್ರಾಮಸ್ವಚ್ಛತೆ, ಗೋಸಂಗೋಪನ, ಅಹಿಂಸಾತ್ಮಕ ಭ್ರಾತೃಭಾವನೆ-ಮೊದಲಾದವುಗಳನ್ನೇ ಕಾರ್ಯಕರ್ತರು ಮಾಡತಕ್ಕ ಕರ್ತವ್ಯಗಳೆಂದು ಸಾರಿದರು "ಗ್ರಾಮಸ್ವರಾಜ್ಯದ ನನ್ನ ಕಲ್ಪನೆ" ಎಂಬ ತಲೆಬರೆಹದಿಂದ ಅವರು ೧೯೪೨ನೇ ಜುಲೈ ೨೬ರ "ಹರಿಜನ" ಸಂಚಿಕೆಯಲ್ಲಿ ಬರೆದ ಲೇಖನದ ಭಾಗವು ಇಲ್ಲಿ ಉದ್ಧರಣಾರ್ಹವಾಗಿದೆ.

"My Idea of village Swaraj is that it is a complete republic independent of its neighbours for its own vital wants and yet interdependent for many others in which dependence is a necessity Thus every village's first concern will be to grow its own food crops and cotton for its cloth. It should have a reserve for its cattle, recreation and playgrounds for its adults and children. Then if there is more land available it will grow useful money crops, thus excluding ganja, tobacco, opium and the like. The village will have a theatre, school and public hall. There will be no casts such as we have today with their graded untouchability. Education will be compulsory up to the final basic course...... There will be a compulsory service of village guards...... The government of the village will be conducted by the Panchayats elected by the villagers, male and female...... They will have all the authority and jurisdiction required...... This Panchayat will be the legislature, judiciary and executive combined...... Any village can become such a republic today without much interference......"

„ನನ್ನ ಕಲ್ಪನೆಯ ಗ್ರಾಮಸ್ವರಾಜ್ಯವು ಹೀಗಿರತಕ್ಕದ್ದು:— ಗ್ರಾಮವು ತನ್ನ ಜೀವನಾವಶ್ಯಕತೆಗಳಿಗೆಲ್ಲ ಪೂರ್ಣ ಸ್ವಾವಲಂಬಿಯಾಗಿದ್ದು, ಸ್ವಾವಲಂಬಿಯಾಗಿರಲು ಅಶಕ್ಯವಾದ ಇತರ ವಿಷಯಗಳ ಬಗ್ಗೆ ಮಾತ್ರವೇ ಅನ್ಯ ಗ್ರಾಮಗಳ ಆಶ್ರಯ ಪಡೆಯಬೇಕು. ಅಂದರೆ, ತನ್ನ ಆಹಾರ ಧಾನ್ಯಗಳನ್ನೂ ಬಟ್ಟೆಗೆ ಬೇಕಾಗುವ ಹತ್ತಿಯನ್ನೂ ತಾನೇ ಉತ್ಪಾದಿಸಿಕೊಳ್ಳಬೇಕು. ಪ್ರತಿಗ್ರಾಮಕ್ಕೆ ಹುಲ್ಲುಗಾವಲಿರಬೇಕು, ಮಕ್ಕಳಿಗೂ ಪ್ರಬುದ್ಧರಿಗೂ ಆಟಪಾಟಗಳಿಗಾಗಿ ವ್ಯಾಯಾಮಶಾಲೆಗಳೂ ಇರಬೇಕು...ತನ್ನದೇ ಆದ ನಾಟಕಗೃಹ, ಶಾಲೆ, ಸಭಾಗೃಹ ಇರಬೇಕು; ನೀರು ಪೂರೈಕೆಯ ಜಲಾಶಯ ಇರಬೇಕು; ಮೂಲ ಶಿಕ್ಷಣದ ಕೊನೆಯ ಹಂತದ ವರೆಗೂ ಉಚಿತ ಶಿಕ್ಷಣ ಇರಬೇಕು, ಹಾಗೂ ಕಡ್ಡಾಯವಾಗಿರಬೇಕು. ಶಕ್ಯವಿದ್ದಮಟ್ಟಿಗೆ ಎಲ್ಲ ಕಾರ್ಯಗಳೂ

ಸಹಕಾರಿ ತತ್ತ್ವದ ಮೇಲೆ ಸಾಗಬೇಕು. ಈಗಿರುವಂತೆ ಅಸ್ಪೃಶ್ಯ ಜಾತಿ ಹಿಡಿದು ಬ್ರಾಹ್ಮಣರ ವರೆಗಿನ ಮೇಲು-ಕೀಳಿನ ಜಾತಿ ಪದ್ಧತಿ ಇರಬಾರದು. ಗ್ರಾಮದ ಆಡಳಿತ ನಡೆಸಲು ಜನರಿಂದ ವರ್ಷಕ್ಕೊಮ್ಮೆ ಚುನಾಯಿತವಾದ ಐದು ಮಂದಿಯ ಪಂಚಾಯತ ಇರಬೇಕು. ಇದರಲ್ಲಿ ಸ್ತ್ರೀಪ್ರತಿನಿಧಿಗಳೂ ಇರಬೇಕು. ಗ್ರಾಮದ ಎಲ್ಲ ಜನರಿಂದಲೂ ಆರಿಸಲ್ಪಟ್ಟ ಗ್ರಾಮರಕ್ಷಕ ದಳ ಇರಬೇಕು.

ಮಹಾತ್ಮರ ಈ ರಾಮರಾಜ್ಯ ಘಟಕವನ್ನು ರಚಿಸಬೇಕಾದರೆ, ಭಾರತೀಯರು ಮೊಟ್ಟಮೊದಲು ತಮ್ಮ ರಾಷ್ಟ್ರದ ಪ್ರಾಚೀನ ವೈಭವವನ್ನು ಸ್ಮರಿಸಿ ನೋಡಿಕೊಳ್ಳಬೇಕು; ತಾವು ಕಳೆದುಕೊಂಡಿದ್ದ ಅನುಪಮ ಮೌಲ್ಯವನ್ನು ತೂಗಿನೋಡಿಕೊಳ್ಳಬೇಕು. ಹಾಗೆ ಮಾಡುವಾಗ, ಆಧುನಿಕವಾದ ಎಷ್ಟೋ ವಿಚಾರಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾಗುವುದು. ಮಹರ್ಷಿ ಅರವಿಂದರು ಈ ಕುರಿತು ಸಾರಿದ ಸಂದೇಶವೊಂದನಿಲ್ಲಿ ಎತ್ತಿ ಹೇಳುವಂತಿದೆ —

"You must know your vast past and recover it for the purposes of your future, First, there fore, become Indians, recover the patrimony of your forefather It is the spirituality of India, the sadhana of India Tapasya Jnana and Shakti that must make us free and great. India's work is worlds work, God's work,

(ಅರ್ಥ— ಭಾರತೀಯರು ತಮ್ಮ ಅದ್ಭುತವಾದ ಭೂತಕಾಲದ ಸ್ಥಿತಿಯನ್ನು ಅರಿಯಬೇಕು, ಹಾಗೂ ತಮ್ಮ ಭವಿತವ್ಯಕ್ಕಾಗಿ, ಅದನ್ನು ಪುನಃ ಪಡೆಯಬೇಕು. ಆದ್ದರಿಂದ ಮೊಟ್ಟಮೊದಲು ಭಾರತೀಯ ಭಾವನೆಯುಳ್ಳವರಾಗಿ, ಹಿಂದಿನವರು ಗಳಿಸಿಟ್ಟಿದ್ದ ಆಧ್ಯಾತ್ಮಿಕ ಸಂಪತ್ತನ್ನು ಪಡೆಯಬೇಕು; ಅವರ ಸಾಧನಾ, ತಪಸ್ಸು, ಜ್ಞಾನ, ಶಕ್ತಿಗಳೇ ನಮ್ಮನ್ನು ಸ್ವತಂತ್ರರನ್ನಾಗಿಯೂ, ಮಹಿಮಾಶಾಲಿಗಳನ್ನಾಗಿಯೂ ಮಾಡಬೇಕು. ಭಾರತದ ಈ ಕಾರ್ಯವು ಇಡೀ ಜಗತ್ತಿನ ಕಾರ್ಯವಾಗುವುದು, ಹಾಗೂ ದೇವರ ಕಾರ್ಯವಾಗುವುದು.)

ಭಾರತದ ಕಾರ್ಯವು ಜಗತ್ತಿನ ಕಾರ್ಯ; ಅದು ದೇವರ ಕಾರ್ಯ – ಎಂಬ ಅರವಿಂದವಾಣಿಯಲ್ಲಿ ಅಡಕವಾದ ಅರ್ಥವು ಹೊಸ ಸಮಾಜದ ಮತ್ತು ಹೊಸಮನ್ವಂತರದ ತಳಪಾಯವನ್ನು ಸ್ಪಷ್ಟವಾಗಿ ಗುರುತಿಸುತ್ತಿದೆ. ಹೊಸ ಸಮಾಜ ಮತ್ತು ಹೊಸ ಮನ್ವಂತರವೆಂದ ಮಾತ್ರಕ್ಕೆ ಬೆಚ್ಚಿ ಬೀಳಬೇಕಾಗಿಲ್ಲ; ಅಥವಾ, ಅನುಪಯುಕ್ತವೂ ಪ್ರತಿಗಾಮಿಯೂ ಆದ ಹಳೆಯ ಕಟ್ಟು ಕಟ್ಟಳೆಗಳ ಪುನರುತ್ಥಾನ ಮಾಡುವುದೆಂಬ ಅರ್ಥವೂ ಅಲ್ಲ. ಈಗ ನಡೆದಿರುವ ಅತಿಭೌತದ, ಅರ್ಥಾತ್, " ದುಡ್ಡೇ ದೊಡ್ಡಪ್ಪ " ನೆಂಬ ಗರ್ವಾಂಧತೆಯ ಚಟುವಟಿಕೆಗಳನ್ನು ಸ್ತಿಮಿತಕ್ಕೆ ತಂದು, ಪಾಪ–ಪುಣ್ಯ ತುಲನೆಯ ನ್ಯಾಯ–ನೀತಿಯ ಸತ್ಯ ದೃಷ್ಟಿಯನ್ನು ಹಬ್ಬಿಸುವುದು, ಹಾಗೂ ಆ ದೃಷ್ಟಿ ಪಥದಲ್ಲೇ ಸರ್ವಸಮಾಜಗಳೂ, ಅವುಗಳ ನೇತಾರರೂ ನಡೆದುಕೊಳ್ಳುವಂತೆ ಹೃದಯ ಪರಿವರ್ತನೆ ಮಾಡುವುದು. ಇದೊಂದು ದೊಡ್ಡ ' ಕ್ರಾಂತಿ ' ಯೇ ! ದುಷ್ಟ ದಮನ, ಶಿಷ್ಟ ಪರಿಪಾಲನ " ವೆಂಬ ಅವತಾರಿಕ ಪುರುಷರ ಕ್ರಾಂತಿಯಲ್ಲಿ ಪುನಘೋರ ಸಂಗ್ರಾಮಗಳಾಗಿ, ರಕ್ತದ ನದಿಗಳೇ ಹರಿದು ಹೋದುವಲ್ಲವೆ? ಆದರೆ, ಬುದ್ಧ ದೇವನು ಆ ರಕ್ತ ನದಿಗೆ ಒಟ್ಟುಗಟ್ಟಿ, ಸರ್ವಸಮಾನತೆಯ ಮತ್ತು " ಅತಿ ಸರ್ವತ್ರ ವರ್ಜ್ಯ " ವಾದ, ಸಂಯಮದ, ಪ್ರೇಮಾ ಹಿಂಸೆಯ ಅಮೃತ ಪ್ರವಾಹವನ್ನು ದೇಶದ ತುಂಬೆಲ್ಲ ಹರಿಯಿಸಲಿಲ್ಲವೆ ? ಅಂತಹ ಮಹಾಪರಿವರ್ತನವನ್ನಿಂದು ನಾವು ನಮ್ಮ ಸಾಮಾಜಿಕ–ಆರ್ಥಿಕ ಜೀವನ ನೀತಿಯಲ್ಲಿ ತರುವುದೇ ಮಹಾತ್ಮರು ನಿರ್ದೇಶಿಸಿದ "ಸರ್ವೋದಯ" ಸಮಾಜ ದರ್ಶನ ಈ ಕ್ರಾಂತಿಯು ಒಳಗಿನ ಕ್ರಾಂತಿ, ಹೊರಗಿನ ವೇಷ-ಭೂಷಣ ವಿಲಾಸ ವಿಭ್ರಮಗಳ ಬದಲಾವಣೆಯ ಕ್ರಾಂತಿಯಲ್ಲ. ಆದ್ದರಿಂದ, ಇದನ್ನು 'ಜಾರಿ' ಗೆ ತರಲು ವಿಶೇಷ ಧೈರ್ಯಬೇಕು. ಬಹಳ ಸಹನೆ ಬೇಕು. ಅಕ್ರೋಧದಿಂದ ಕ್ರೋಧವನ್ನೂ, ಬಡತನದಿಂದ ಸಿರಿತನವನ್ನೂ ಜಯಿಸುವ ಛಲಬೇಕು. ಗಾಂಧೀಜೀಯವರು ಈ ಸಮಾಜ ದರ್ಶನವನ್ನು ಮೊತ್ತಮೊದಲಿಗೆ ಕಂಡ ಸನ್ನಿವೇಶವನ್ನು ಅವರೇ ಹೀಗೆ ಬಣ್ಣಿಸಿದ್ದಾರೆ—

" When I found myself drawn into the political coil I asked myself what was necessary for me in order to remain absolutely untouched by immorality, by untruth, by what

is known as political gain ······ I do not propose to take you through all the details of that act or performance · · Be that as it may, I came definitely to the conclusion that if I had to serve the people in whose midst my life was cast and of whose difficulties I was a witness from day to day, I must discard all wealth, all possession''

[ನಾನು ರಾಜಕಾರಣದ ಜಂಜಡದಲ್ಲಿ ಸಿಕ್ಕಕೊಡಲೇ ರಾಜಕಾರಣದಲ್ಲಿ ಕಾಣಿಸಿಕೊಳ್ಳುವ ಅನೀತಿ, ಅಸತ್ಯ ಮತ್ತು ರಾಜಕೀಯ ಲಾಭಗಳಿಂದ ದೂರವಾಗಿರಬೇಕಾದರೆ ಏನು ಮಾಡುವದು ಅವಶ್ಯಕವಾಗಿದೆ ಎಂಬ ಬಗ್ಗೆ ನನ್ನ ಅಂತರಾತ್ಮನಿಗೆ ಕೇಳಿದೆನು...... ಅಂತರಾತ್ಮನು ಹೇಳಿದ್ದನ್ನು ಮತ್ತು ನಾನು ಅದನ್ನು ಪಾಲಿಸಲು ಏನೇನು ಕಷ್ಟ ನಷ್ಟಗಳನ್ನು ಸಹಿಸಿದೆನೆಂಬದನ್ನು ಇಲ್ಲಿ ಹೇಳಲಿಚ್ಛಿಸುವದಿಲ್ಲ...... ಒಟ್ಟಿನಲ್ಲಿ ಒಂದು ನಿರ್ದಿಷ್ಟವಾದ ನಿರ್ಣಯಕ್ಕೆ ಬಂದೆನು. ಅದೆಂದರೆ ಯಾವ ಜನರ ದುಃಖ ದುಮ್ಮಾನಗಳನ್ನು ನಾನು ದಿನ ದಿನವೂ ಕಣ್ಣಾರೆ ಕಂಡಿರುವೆನೋ ಅಂಥ ಜನರ ಸೇವೆಯನ್ನು ನಾನು ಕೈಕೊಳ್ಳಬೇಕಾದರೆ ಮೊದಲು ನನ್ನಲ್ಲಿರುವ ಸಂಪತ್ತನ್ನೆಲ್ಲ ಸೊತ್ತನ್ನೆಲ್ಲ ನಾನು ತ್ಯಜಿಸಲೇಬೇಕು.'' ]

ಜನ ಸೇವೆಯನ್ನು ಕೈಕೊಳ್ಳುವವನು ತನ್ನ ಸಂಪತ್ತನ್ನು ತನ್ನ ಸೊತ್ತನ್ನು ತ್ಯಜಿಸಬೇಕೆಂದು ಗಾಂಧೀಜಿಯವರು ನಿರ್ಣಯಕ್ಕೆ ಬಂದರು. ಇದಕ್ಕೆ ಕಾರಣ ವೆಂದರೆ ಮನುಷ್ಯನ ಸ್ವಾರ್ಥದ ಮೂಲವು ಸಂಪತ್ತು ಅಥವಾ ಸೊತ್ತನ್ನು ಗಳಿಸಬೇಕೆಂಬ ಬಗ್ಗೆ ಅವನಲ್ಲಿರುವ ಆಸೆ. ಅದನ್ನೇ ಅಳಿಸಿಬಿಟ್ಟರೆ ಅವನ ಸ್ವಾರ್ಥಕ್ಕೆ ಎಡೆಯಿಲ್ಲದಾಗಿ ಅವನು ನಿಸ್ವಾರ್ಥಿಯಾಗುತ್ತಾನೆ.

ಇಂದು ಭಾರತದ ಹಳ್ಳಿಗಳ ಪುನರುದ್ಧಾರವಾಗಬೇಕಾದರೆ, ಭಾರತದ ದೀನ ದರಿದ್ರರ ಉದ್ಧಾರವಾಗಬೇಕಾದರೆ ನಿಸ್ವಾರ್ಥಿಗಳು ನಿಷ್ಕಾಮ ಸೇವೆಗೈಯುವ ವರು ಬೇಕಾಗಿದ್ದಾರೆ. ಅಂಥ ನಿಷ್ಕಾಮಕರ್ಮಯೋಗಿಗಳನ್ನು ನಿರ್ಮಿಸುವದೇ ಸರ್ವೋದಯ ಸಮಾಜದ ಮುಖ್ಯ ಗುರಿಯಾಗಿದೆ. ಈ ಕಾರ್ಯವು ಹೇಗೆ ಮುಂದುವರಿದಿದೆ ಎಂಬುದನ್ನೂ ಇಂದು ಸರ್ವೋದಯ ಸಮಾಜವು ನಮ್ಮ ಸುಖಶಾಂತಿಗಳಿಗೆ ಆವಶ್ಯಕವೂ ಅನಿವಾರ್ಯವೂ ಹೇಗೆ ಆಗಿದೆ ಎಂಬುದನ್ನು ವಿಚಾರಿಸೋಣ.

# ಗ್ರಾಮೋದ್ಧಾರ - ಜಗದೋದ್ಧಾರ

ಭಾರತವು ಉದ್ಧಾರವಾಗಬೇಕಾದರೆ, ಜಗತ್ತು ಉದ್ಧಾರವಾಗಬೇಕಾದರೆ ಮೊದಲು ಹಳ್ಳಿಗಳ ಉದ್ಧಾರವಾಗಬೇಕೆಂಬುದು ಮಹಾತ್ಮರ ಅಭಿಪ್ರಾಯವಾಗಿದೆ. ಇದೇ ಗಾಂಧೀಜಿಯವರ ತತ್ತ್ವಜ್ಞಾನದ ವೈಶಿಷ್ಟ್ಯವಾಗಿದೆ. ಆಧುನಿಕ ಕಾಲದಲ್ಲಿ ಮಾನವನ ಉದ್ಧಾರವನ್ನು, ಜಗತ್ತಿನ ಉದ್ಧಾರವನ್ನು ಗುರಿಯನ್ನಾಗಿಟ್ಟುಕೊಂಡು ಹೊರಟ ಸಮತಾವಾದ ( Communism ) ಸಮಾಜವಾದ ( Socialism ) ಗಳಿಗೂ ಗಾಂಧಿವಾದ ( Gandhism ) ಕ್ಕೂ ಇರುವ ಮುಖ್ಯ ಅಂತರವೆಂದರೆ ಇದೇ.

ಸಮತಾವಾದ ಹಾಗೂ ಸಮಾಜವಾದಗಳು ಪಟ್ಟಣಗಳ ಮೇಲೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದವು. ಶ್ರಮಜೀವಿಗಳ ಉದ್ಧಾರವೇ ತಮ್ಮ ಗುರಿ ಎಂದು ಹೇಳುತ್ತಿರುವ ಆ ವಾದಗಳಿಗೆ ಕಾರಖಾನೆಯ ಕೂಲಿಕಾರರೇ ಹೆಚ್ಚಾಗಿ ಕಂಡು ಬಂದರು. ಕೂಲಿಕಾರ ಸಂಘಟನೆ (Trade Unionism) ಗೇ ಅವರು ಮಹತ್ವಕೊಟ್ಟರು. ಉತ್ಪಾದನೆಯ ಸಾಧನಗಳನ್ನು ವಶಪಡಿಸಿಕೊಳ್ಳಬೇಕೆಂದು ಹೇಳಿದಾಗ ಅವರ ಕಣ್ಣು ಮುಂದೆ ದೊಡ್ಡ ದೊಡ್ಡ ಕಾರಖಾನೆಗಳೇ ಇದ್ದವು. ಸಮತಾವಾದ ಹಾಗೂ ಸಮಾಜವಾದಗಳು ಹೀಗೆ ಮಾಡಲು ಕಾರಣವೂ ಇತ್ತು. ದುಡಿಯುವವರ ಮತ್ತು ದುಡಿಸಿಕೊಳ್ಳುವವರ ಸಮಸ್ಯೆಯು ಔದ್ಯೋಗಿಕ ಕ್ರಾಂತಿ ( Industrial Revolution ) ಯಿಂದಲೇ ಬಹಳ ತೀಕ್ಷ್ಣವಾದ ಸ್ವರೂಪವನ್ನು ತಾಳಿತು. ಯಂತ್ರಗಳೂ ಕಾರಖಾನೆಗಳೂ ಬಂದು ಉತ್ಪಾದನೆಯ ಸಾಧನೆಗಳನ್ನೆಲ್ಲ ಕೆಲವೇ ಬಂಡವಾಳದಾರರ ಕೈಯಲ್ಲಿ ಕೇಂದ್ರೀಕರಣಗೊಳಿಸಿದವು. ಇದರಿಂದ ಕೆಲವೇ ಬಂಡವಾಳದಾರರು ಕೋಟ್ಯಾವಧಿ ಕೂಲಿಕಾರರ ರಕ್ತವನ್ನು ಹಿಂಡಿ ಅವರನ್ನು ಹಿಪ್ಪೆಯನ್ನಾಗಿ ಮಾಡತೊಡಗಿದರು. ಈ ಸ್ಥಿತಿಯನ್ನು ಕಂಡು ಮರುಗಿದ ಸಮತಾವಾದಿಗಳು ಸಮಾಜವಾದಿಗಳು ಉತ್ಪಾದನೆಯ ಸಾಧನೆಗಳನ್ನು ಬಂಡವಾಳದಾರರ ಕೈಯಿಂದ ಕಸಿದುಕೊಂಡು ಕೂಲಿಕಾರರ ಕೈಯಲ್ಲಿ ಕೊಡಲು ಪ್ರಯತ್ನಿಸಿದರು. ಈ

ಪ್ರಯತ್ನದಲ್ಲಿ ಅವರಿಗೆ ಹಳ್ಳಿಗಳ ಹಾಗೂ ಅಲ್ಲಿ ನಡೆಯುವ ಉತ್ಪಾದನೆಗಳ ಸಂಹಸ್ತವು ಕಂಡು ಬರಲಿಲ್ಲ. ಯಾಕೆಂದರೆ ಹಳ್ಳಿಯ ಉತ್ಪಾದನೆಯು ತೀರ ಸಣ್ಣ ಪ್ರಮಾಣದಲ್ಲಿ ನಾವಕಾಶವಾಗಿ ನಡೆಯುತ್ತಿತ್ತು.

ಯಾಂತ್ರಿಕ ಉತ್ಪಾದನೆಯ ರೀತಿ-ನೀತಿಗಳ ಮುಂದೆ ಹಳ್ಳಿಯ ಉತ್ಪಾದನೆಯ ರೀತಿ-ನೀತಿಗಳು ತೀರ ಹಳೆಯವೆನಿಸಿದವು. ಆದುದರಿಂದ ಹಳ್ಳಿಗಳ ಉತ್ಪಾದನೆಯ ರೀತಿ-ನೀತಿಗಳನ್ನು ಬದಲು ಮಾಡಿ ಯಾಂತ್ರಿಕ ರೀತಿಯ ಉತ್ಪಾದನೆಯನ್ನೇ ಅಲ್ಲಿಯೂ ಬಳಕೆಯಲ್ಲಿ ತರಲಾಯಿತು. ಇದರಿಂದ ಹಳ್ಳಿಗಳು ಹಾಳಾಗಿ ಅವುಗಳ ಸ್ಥಳದಲ್ಲಿ ಕಾರಖಾನೆಯ ಸಣ್ಣ ಕೇಂದ್ರಗಳು ಉಂಟಾದವು. ಪಟ್ಟಣಗಳು ಕಾರಖಾನೆಯ ದೊಡ್ಡ ಕೇಂದ್ರಗಳಾದವು.

ಸಮಾಜವಾದ ಸಮತಾವಾದಗಳಲ್ಲಿ ಉತ್ಪಾದನೆಯ ಮೂಲಸಾಧನಗಳು ಯಂತ್ರಗಳೇ ಆದವು. ಇದರಿಂದ ಔದ್ಯೋಗೀಕರಣವು ಬೆಳೆದು ಬಂದಿತು. ಔದ್ಯೋಗೀಕರಣದಿಂದ ಮಾನವನ ಉದ್ಧಾರವಾಗುವ ಬದಲು ಅವನ ಅಧಃಪತನವಾಯಿತು.

ಈ ಮಾತನ್ನು ಅರಿತಿದ್ದ ಗಾಂಧೀಜಿಯವರು "Industrialism is, I am afraid, going to be a curse for mankind." (ಔದ್ಯೋಗೀಕರಣವು ಮನುಕುಲಕ್ಕೆ ಒಂದು ಶಾಪವಾಗಿ ಪರಿಣಮಿಸಬಹುದೆಂಬ ಹೆದರಿಕೆ ನನಗಿದೆ.) ಎಂದು ಹೇಳಿ ಅದಕ್ಕೆ ಕಾರಣ ಹೀಗೆ ಕೊಟ್ಟಿದ್ದಾರೆ:-

Industrialism depends entirely on your capacity to exploit, on foreign markets being open to you and on the absence of competitors.

[ **ಶೋಷಣೆ ಮಾಡಲು ನಿಮ್ಮಲ್ಲಿರುವ ಬಲ, ನಿಮಗೆ ದೊರೆಯುವ ಪರದೇಶದ ಪೇಟೆಗಳು ಮತ್ತು ನಿಮ್ಮ ಕೂಡ ಸ್ಪರ್ಧೆಗೆ ನಿಲ್ಲುವವರ ಅಭಾವ ಇವುಗಳನ್ನೇ ಔದ್ಯೋಗೀಕರಣವು ಸಂಪೂರ್ಣವಾಗಿ ಅವಲಂಬಿಸಿದೆ.** ]

ಔದ್ಯೋಗೀಕರಣದ ಈ ಮೀಮಾಂಸೆಯನ್ನು ನಾವು ತಿಳಿದಾಗ ಔದ್ಯೋಗೀಕರಣವು ಹೇಗೆ ಸಾಮ್ರಾಜ್ಯವಾದಕ್ಕೆ ಕಾರಣವಾಗುತ್ತದೆಂಬದನ್ನು ನಾವು

ಅರ್ಥ ಮಾಡಿಕೊಳ್ಳುತ್ತೇವೆ. ಮತ್ತು ಔದ್ಯೋಗಿಕರಣವು ಏಕೆ ಶಾಪವಾಗಿ ಪರಿಣಮಿಸುವದೆಂಬದೂ ನಮಗೆ ಅರ್ಥವಾಗುತ್ತದೆ. ಔದ್ಯೋಗೀಕರಣವು ಶೋಷಣೆಯ ಮೇಲೆ ನಿಂತಿದೆ. ಶೋಷಣೆಯು ಹಿಂಸೆಗೆ ಜನ್ಮಕೊಡುತ್ತದೆ. ಆದರಿಂದ ಹಲವು ಅನರ್ಥ ಪರಂಪರೆಗಳು ಜರುಗುತ್ತವೆ. ಹೀಗಾಗಿ ಔದ್ಯೋಗೀಕರಣವು ನಮಗೆ ಶಾಪವಾಗಿ ಪರಿಣಮಿಸುತ್ತದೆ. ಈ ಮಾತನ್ನು ಗಾಂಧೀಜಿಯವರು ಹೀಗೆ ಹೇಳಿದ್ದಾರೆ:-

"You cannot build non-violence on a factory civilization but it can be built on self-contained villages. Rural economy as I have conceived it, eschews exploitation altogether and exploitation is the essence of violence."

[ ಕಾರಖಾನೆಯ ನಾಗರಿಕತೆಯ ಮೇಲೆ ನೀವು ಅಹಿಂಸೆಯ ಕಟ್ಟಡವನ್ನು ಕಟ್ಟಲಾರಿರಿ. ಸ್ವಯಂಪೂರ್ಣವಾದ ಹಳ್ಳಿಗಳ ಮೇಲೆ ಅಹಿಂಸೆಯ ಕಟ್ಟಡವನ್ನು ನಿಲ್ಲಿಸುವದು ಸಾಧ್ಯವಿದೆ. ನಾನು ಕಲ್ಪಿಸಿಕೊಂಡಿರುವ ಹಳ್ಳಿಯ ಅರ್ಥಶಾಸ್ತ್ರವು ಶೋಷಣೆಯನ್ನು ಸಂಪೂರ್ಣವಾಗಿ ತೊಲಗಿಸುತ್ತದೆ. ಮತ್ತು ಶೋಷಣೆಯೇ ಹಿಂಸೆಯ ಸಾರಸತ್ವವಾಗಿದೆ. ]

ಗಾಂಧೀಜಿಯವರ ಈ ಮಾತಿನ ಸತ್ಯತೆಯನ್ನು ಅರಿಯಬೇಕಾದರೆ ಸಮತೆಯ ಮೇಲೆ ಸಮಾಜವನ್ನು- ವರ್ಗರಹಿತ ಸಮಾಜವನ್ನು ಕಟ್ಟಲು ಹೊರಟ ರಶಿಯಾ, ಚೀನಾ ದೇಶಗಳು ಹೇಗೆ ಸಾಮ್ರಾಜ್ಯವಾದಿಗಳೂ ಹಿಂಸಾವಾದಿಗಳೂ ಆಗಿವೆ ಎಂಬದನ್ನು ಸ್ವಲ್ಪ ಕಣ್ಣು ತೆರೆದು ನೋಡಬೇಕು.

ಔದ್ಯೋಗಿಕರಣವು ಮಾನವ ಕುಲಕ್ಕೆ ಶಾಪವಾಗಿ ಪರಿಣಮಿಸಲು ಇನ್ನೂ ಒಂದು ಕಾರಣವಿದೆ. ಅದೆಂದರೆ ಉತ್ಪಾದನೆಯ ಕೇಂದ್ರೀಕರಣ ಹಾಗೂ ರಾಕ್ಷಸಪ್ರಮಾಣದ ಉತ್ಪಾದನೆ. ಇದರ ಬಗ್ಗೆ ಗಾಂಧೀಜಿಯವರು ಬಹಳ ಚೆನ್ನಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

"I would catagorically state my conviction that the mania for mass-production is responsible for the world crisis. Granting for the moment that machinery may supply all the needs of

humanity, still it would concentrate production in particular areas, so that you would have to go about in a round about way to regulate distribution."

[ಜಗತ್ತಿನಲ್ಲಿ ಇಂದು ತಲೆದೋರಿರುವ ಸಂಕಟಕಾರಕ ಪರಿಸ್ಥಿಗೆ ರಾಕ್ಷಸ ಪ್ರಮಾಣದ ಉತ್ಪಾದನೆಯ ಬಗ್ಗೆ ನಮಗೆ ಹಿಡಿದಿರುವ ಹುಚ್ಚೇ ಕಾರಣವೆಂದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ಮನುಷ್ಯನ ಆವಶ್ಯಕತೆಗಳನ್ನೆಲ್ಲ ಯಂತ್ರಗಳೇ ಪೂರೈಸುತ್ತವೆಂದು ಕ್ಷಣ ಹೊತ್ತು ಕಲ್ಪಿಸಿದರೂ ಯಂತ್ರಗಳು ಉತ್ಪಾದನೆಯನ್ನು ಕೆಲವೇ ಸ್ಥಳಗಳಲ್ಲಿ ಕೇಂದ್ರೀಕರಿಸುವದರಿಂದ ಆ ಉತ್ಪಾದನೆಯ ಹಂಚುವಿಕೆಗಾಗಿ ನಾವು ಮತ್ತೆ ದ್ರಾವಿಡ ಪ್ರಾಣಾಯಾಮವನ್ನೇ ಮಾಡಬೇಕಾಗುತ್ತದೆ.]

ಒಟ್ಟಿನಲ್ಲಿ ಇಂದಿನ ನಾಗರಿಕತೆಯ ಸಮಸ್ಯೆಗಳಿಗೆಲ್ಲ ಉತ್ಪಾದನೆಯ ಸಾಧನಗಳ ಕೇಂದ್ರೀಕರಣ, ರಾಕ್ಷಸ ಉತ್ಪಾದನೆ ಮತ್ತು ಈ ಉತ್ಪಾದನೆಯ ವಿತರಣದ ರೀತಿ-ನೀತಿಗಳೇ ಕಾರಣವೆಂಬುವದನ್ನು ಗಾಂಧೀಜಿಯವರು ಸರಿಯಾಗಿ ಕಂಡುಹಿಡಿದಿದ್ದಾರೆ.

ಔದ್ಯೋಗೀಕರಣವು ಇಂದು ನಮ್ಮಲ್ಲಿ ಎರಡು ತರದ ನಾಗರಿಕತೆಗಳನ್ನು ನಿರ್ಮಿಸಿದೆ. ಒಂದು ವಿನಾಶಕವಾದ ನಾಗರಿಕತೆಯಾಗಿದೆ; ಇನ್ನೊಂದು ವಿಧಾಯಕವಾದ ನಾಗರಿಕತೆಯಾಗಿದೆ. ಇವೆರಡೂ ನಾಗರಿಕತೆಗಳನ್ನು ಗಾಂಧೀಜಿಯವರು ಕೆಳಗಿನಂತೆ ವಿಂಗಡಿಸಿದ್ದಾರೆ.

" There are two schools of thonght current in the world. One wants to divide the world into cities and the other into villages. The village civilization and city civilization are totally different things. One depends on machinery and industrialisation and the other on handicrafts. We have given preferene to latter.

After all, this industrialization and large scale production are only of comparatively recent growth. We don't know how far it has contributed to the development of our happiness, but

we know this much that it has brought in its wake the recent world wars. This second world war is not still over and even if it comes to an end, we are hearing of a third world war…"

[ ಈಗ ಜಗತ್ತಿನಲ್ಲಿ ಎರಡು ವಿಚಾರ ಪ್ರವಾಹಗಳು ಹರಿಯುತ್ತಲಿವೆ. ಅವುಗಳಲ್ಲಿ ಒಂದು ಈ ಜಗತ್ತನ್ನು ಪಟ್ಟಣಗಳಲ್ಲಿ ವಿಭಾಗಿಸಬೇಕೆನ್ನುತ್ತದೆ. ಇನ್ನೊಂದು ಈ ಜಗತ್ತನ್ನು ಹಳ್ಳಿಗಳಲ್ಲಿ ಹಂಚಿಬಿಡಬೇಕೆನ್ನುತ್ತದೆ. ಹಳ್ಳಿಯ ನಾಗರಿಕತೆ ಹಾಗೂ ಪಟ್ಟಣದ ನಾಗರಿಕತೆ ಎಂಬವು ಎರಡು ತೀರ ಭಿನ್ನವಾದ ವಸ್ತುಗಳಾಗಿವೆ. ಪಟ್ಟಣದ ನಾಗರಿಕತೆಯು ಯಂತ್ರಗಳನ್ನೂ ಔದ್ಯೋಗೀಕರಣವನ್ನೂ ಅವಲಂಬಿಸಿ ನಿಂತಿದೆ. ಹಳ್ಳಿಯ ನಾಗರಿಕತೆಗೆ ಕೈಗಾರಿಕೆಗಳೇ ಆಧಾರವಾಗಿವೆ. ನಾವು ಮಾತ್ರ ಹಳ್ಳಿಯನಾಗರಿಕತೆಗೇ ಪ್ರಾಧಾನ್ಯಕೊಟ್ಟಿದ್ದೇವೆ.

ಈ ಔದ್ಯೋಗೀಕರಣವೂ ರಾಕ್ಷಸ ಪ್ರಮಾಣದ ಉತ್ಪಾದನೆಯೂ ತೀರ ಇತ್ತೀಚೆಗೆ ಜನ್ಮತಾಳಿರುವದರಿಂದ ಅವು ನಮ್ಮ ಸುಖವನ್ನು ಹೆಚ್ಚಿಸಲು ಎಷ್ಟರ ಮಟ್ಟಿಗೆ ನೆರವಾಗಿವೆ ಎಂಬುದನ್ನು ಈಗಲೇ ನಿರ್ಧರಿಸಲು ಸಾಧ್ಯವಿಲ್ಲ. ಆದರೆ ಈ ಔದ್ಯೋಗೀಕರಣವೂ, ರಾಕ್ಷಸ ಪ್ರಮಾಣದ ಉತ್ಪಾದನೆಯೂ ಇತ್ತೀಚಿನ ಜಾಗತಿಕ ಯುದ್ಧಗಳನ್ನು ತಮ್ಮ ಸಂಗಡ ಕರೆದು ತಂದಿವೆ ಎಂಬುದನ್ನು ಮಾತ್ರ ನಾವೆಲ್ಲರೂ ಬಲ್ಲೆವು. ಎರಡನೆಯ ಜಾಗತಿಕ ಯುದ್ಧವು ಇನ್ನೂ ಕೊನೆಗಂಡಿಲ್ಲ. ಅದು ಕೊನೆಗಂಡರೂ ನಾವು ಮೂರನೆಯ ಜಾಗತಿಕ ಯುದ್ಧದ ಮಾತಗಳನ್ನು ಕೇಳುತ್ತಲಿದ್ದೇವೆ. ]

ಈ ರೀತಿಯಾಗಿ ನಮ್ಮ ಇಂದಿನ ಸಮಸ್ಯೆಗಳು ಪಟ್ಟಣದ ನಾಗರಿಕತೆಯಿಂದ ಜನ್ಮತಾಳಿವೆ ಎಂಬುದು ನಿರ್ವಿವಾದವಾಗಿದೆ. ಈ ಪಟ್ಟಣದ ನಾಗರಿಕತೆ ಹೋಗಬೇಕಾದರೆ ನಾವು ಔದ್ಯೋಗೀಕರಣವನ್ನು ನಾಶಮಾಡಲೇಬೇಕು. ಈ ಬಗ್ಗೆ ಗಾಂಧೀಜಿಯವರು ಬಹಳ ಸ್ಪಷ್ಟವಾಗಿ ನುಡಿದಿದ್ದಾರೆ.

"The fact is that this industrial civilization is a disease because it is all evil Let us not be deceived by catch words and phrases. I have no quarrel with steam ships or telegraphs. They may stay, if they can, without the support of industrialism and all it connotes. They are not an end. We must not suffer exploitation for the sake of steam ships and

telegraphs. They are in no way indispensable for the permanent we'fare of the human race. Now that we know the use of steam and electricity, we should be able to use them on due occasion and after we have learnt to avoid industialism. Our concern is, therefore, to destroy industrialism at any cost."

[ ಈ ಔದ್ಯೋಗೀಕರಣದ ನಾಗರಿಕತೆಯು ಒಂದು ರೋಗವಾಗಿದೆ. ಯಾಕಂದರೆ ಅದು ಎಲ್ಲ ರೀತಿಯಿಂದಲೂ ಅನಿಷ್ಟಕರವಾಗಿದೆ. ಕೆಲವು ಕೂಗುಗಳಿಂದಲೂ ಸುಭಾಷಿತಗಳಿಂದಲೂ ನಾವು ಮೋಸಹೋಗಕೂಡದು. ಉಗಿ ಹಡಗದ ಕೂಡ ಅಥವಾ ಅಂಚೆ ತಂತಿಯು ಕೂಡ ನನ್ನ ಜಗಳವಿಲ್ಲ. ಔದ್ಯೋಗೀಕರಣದ ಆಧಾರವಿಲ್ಲದೇ ಅವು ಬಾಳಿ ಬದುಕಬಹುದಾದರೆ ಬದುಕಲಿ. ಅವೇ ನಮ್ಮ ಗುರಿಗಳಲ್ಲ. ಉಗಿಹಡಗ ಮತ್ತು ಅಂಚೆ ತಂತಿಗಳ ಸಲುವಾಗಿ ನಾವು ಶೋಷಣೆಗೆ ಒಳಗಾಗಕೂಡದು. ಮಾನವ ಕುಲದ ಶಾಶ್ವತವಾದ ಸುಖಕ್ಕಾಗಿ ಅವು ತೀರ ಅವಶ್ಯವಾದ ವಸ್ತುಗಳೇನೂ ಅಲ್ಲ. ಈಗ ನಮಗೆ ಉಗಿಯು ಹಾಗೂ ವಿದ್ಯುಚ್ಛಕ್ತಿಯ ಉಪಯೋಗ ಗೊತ್ತಾಗಿದೆ. ನಮಗೆ ಅವಶ್ಯವೆನಿಸಿದಾಗ ಮತ್ತು ಔದ್ಯೋಗೀಕರಣವನ್ನು ಹೇಗೆ ತಪ್ಪಿಸಿಕೊಳ್ಳಬೇಕೆಂಬದನ್ನು ನಾವು ಕಲಿತ ನಂತರ ಅವುಗಳನ್ನು ನಾವು ಉಪಯೋಗಿಸಬಹುದು. ಆದುದರಿಂದ ಎಷ್ಟು ನಷ್ಟವಾದರೂ ಚಿಂತೆಯಿಲ್ಲ ಔದ್ಯೋಗೀಕರಣವನ್ನು ನಾಶಗೊಳಿಸುವದೇ ನಮ್ಮ ಮುಖ್ಯ ಕೆಲಸವಾಗಿದೆ." ]

ಈ ರೀತಿಯಾಗಿ ಇಂದಿನ ಸಂಕಟಗ್ರಸ್ತಪರಿಸ್ಥಿತಿಯಿಂದ ಮಾನವ ಕುಲವು ಪಾರಾಗಬೇಕಾದರೆ ಔದ್ಯೋಗೀಕರಣವು ನಾಶವಾಗಬೇಕು. ಔದ್ಯೋಗೀಕರಣವು ನಾಶವಾಗಬೇಕಾದರೆ ಉತ್ಪಾದನೆಯು ವಿಕೇಂದ್ರೀಕರಣವಾಗಬೇಕು. ಉತ್ಪಾದನೆಯು ವಿಕೇಂದ್ರೀಕರಣವೆಂದರೆ ಹಳ್ಳಿಗಳ ಪುನರುತ್ಥಾನವಾಗಬೇಕು. ಅದಕ್ಕಾಗಿ ಗಾಂಧೀಜಿಯವರು ಗ್ರಾಮೋದ್ಧಾರವನ್ನು ತಮ್ಮ ವಿಧಾಯಕ ಕಾರ್ಯಕ್ರಮದ ತಳಹದಿಯನ್ನಾಗಿ ಇಟ್ಟುಕೊಂಡರು. ಇಂದು ಜಗತ್ತಿನ ಉದ್ಧಾರವಾಗಬೇಕಾದರೆ ಹಳ್ಳಿಗಳ ಉದ್ಧಾರವಾಗಬೇಕಾಗಿದೆ. ಹಳ್ಳಿಗಳ ಉದ್ಧಾರವನ್ನೇ ನಮ್ಮ ಸುಧಾರಣೆಗಳೆಲ್ಲ ತಮ್ಮ ಗುರಿಯನ್ನಾಗಿ ಮಾಡಿಕೊಳ್ಳಬೇಕಾಗಿದೆ. ಸರ್ವೋದಯ ಸಮಾಜವೂ ಕೂಡ ಹಳ್ಳಿಗಳಲ್ಲಿ ಮಾತ್ರ

ಉದಯವಾಗಬಲ್ಲದು. ಸರ್ವೋದಯ ಸಮಾಜವೆಂದರೆ ಶೋಷಣರಹಿತ ಸಮಾಜ. ಶೋಷಣರಹಿತ ಸಮಾಜವನ್ನು ನಿರ್ಮಾಣಮಾಡಬೇಕಾದರೆ ಉತ್ಪಾದನೆಯೂ ವಿತರಣವೂ ಸಣ್ಣ ಪ್ರಮಾಣದಲ್ಲಿ ನಡೆಯಬೇಕು. ಇದು ಹಳ್ಳಿಗಳಲ್ಲಿ ಮಾತ್ರವೇ ಶಕ್ಯವಿದೆ.

ಈ ಮಾತನ್ನು ಮನಗಂಡಿದ್ದ ಮಹಾತ್ಮರು ಹಳ್ಳಿಗಳ ಕಡೆಗೆ ಮೊದಲು ಲಕ್ಷ್ಯ ಹಾಕಿದರು. ಬ್ರಿಟಿಶರ ಕಾಲದಲ್ಲಿ ಹಳ್ಳಿಗಳ ಸ್ವಯಂಪೂರ್ಣತೆ ನಷ್ಟವಾಗಿ ಅವು ಕೊಂಪೆಗಳಾದವು. ಈ ಕೊಂಪೆಗಳ ಉದ್ಧಾರವಾಗಬೇಕಾದರೆ ಮೊದಲು ಬ್ರಿಟಿಶರ ಆಳಿಕೆ ಕೊನೆಗೊಳ್ಳಬೇಕು. ಅದಕ್ಕಾಗಿ ಮಹಾತ್ಮರು ಬ್ರಿಟಿಶ ಆಳಿಕೆಯ ವಿರುದ್ಧ ಅಹಿಂಸಾತ್ಮಕವಾದ ಹೋರಾಟವನ್ನು ಹೂಡಿದರು. ಆದರೆ ಅದೇ ಅವರ ಗುರಿಯಾಗಿರಲಿಲ್ಲ. ಈ ಮಾತುಗಳನ್ನು ಹಲವು ಸಾರೆ ಸ್ಪಷ್ಟ ಪಡಿಸಿದ್ದಾರೆ.

"To me political power is not an end but one of the means of enabling people to better their condition in every department of life."

[ನನ್ನ ಮಟ್ಟಿಗೆ ರಾಜಕೀಯ ಅಧಿಕಾರವು ನಾವು ಮುಟ್ಟಬೇಕಾಗಿರುವ ಒಂದು ಗುರಿಯಾಗಿಲ್ಲ. ಆದರೆ ಜನತೆಯು ತನ್ನ ಜೀವನವನ್ನು ಪ್ರತಿಯೊಂದು ವಿಭಾಗದಲ್ಲಿಯೂ ಸುಧಾರಿಸಿಕೊಳ್ಳುವದಕ್ಕೆ ಸಮರ್ಥವಾಗಲು ಅದು ಒಂದು ಸಾಧನ ಮಾತ್ರ.]

ಮಹಾತ್ಮರ ಮನಸ್ಸಿನಲ್ಲಿ ರಾಮರಾಜ್ಯವನ್ನು ಅಂದರೆ ಗ್ರಾಮರಾಜ್ಯವನ್ನು ಸ್ಥಾಪಿಸುವ ಇಚ್ಛೆಯಿತ್ತು. ಅವರ ಸ್ವರಾಜ್ಯದ ಕಲ್ಪನೆಯಾದರೂ ಗ್ರಾಮರಾಜ್ಯವನ್ನೇ ಒಳಗೊಂಡಿತ್ತು. ಅದರ ಬಗ್ಗೆ ಅವರು ಹಲವು ಸಲ ನುಡಿದಿದ್ದಾರೆ, ಬರೆದಿದ್ದಾರೆ. ಭಾರತವು ಗ್ರಾಮರಾಜ್ಯಗಳನ್ನು ಸ್ಥಾಪಿಸಬೇಕು ಎಂದು ಅವರು ಸಾರಿದ್ದಾರೆ. ಇದು ಭಾರತದ ಮಟ್ಟಿಗೆ ಮಾತ್ರ ಸತ್ಯವಲ್ಲ. ಜಗತ್ತಿನ ಮಟ್ಟಿಗೂ ಸತ್ಯವಾಗಿದೆ.

ಇಂದು ಜಗತ್ತಿನಲ್ಲಿ ಔದ್ಯೋಗೀಕರಣದಿಂದ ಮುಂದುವರಿದ ರಾಷ್ಟ್ರಗಳೆಲ್ಲ ತಮ್ಮ ಉತ್ಪಾದನೆಯ ರೀತಿಯನ್ನು ವಿಕೇಂದ್ರೀಕರಣಗೊಳಿಸಬೇಕು. ಅಂದರೆ

ಈಗಿನ ದೊಡ್ಡ ದೊಡ್ಡ ಪಟ್ಟಣಗಳಲ್ಲಿರುವ ಕಾರಖಾನೆಗಳನ್ನೆಲ್ಲ ಮುಚ್ಚಿ ಸಣ್ಣ ಸಣ್ಣ ಹಳ್ಳಿಗಳಲ್ಲಿ ಗೃಹಕೈಗಾರಿಕೆಗಳನ್ನು ಪ್ರಾರಂಭಿಸಬೇಕು. ಇದು ತೀರ ಹುಚ್ಚುತನದ ಕಲ್ಪನೆ ಎನಿಸಬಹುದು. ಆದರೆ ಶೋಷಣ ರಹಿತ ಸಮಾಜವನ್ನು ಕಟ್ಟಬೇಕೆಂದಿದ್ದರೆ, ಜಾಗತಿಕ ಯುದ್ಧವನ್ನು ನಿಲ್ಲಿಸಿಬಿಡಬೇಕೆಂಬ ಇಚ್ಛೆ ಇದ್ದರೆ, ಮಾನವರು ಮಾನವರಾಗಿ ಬಾಳಬೇಕೆಂದು ನಾವು ನಿಜವಾಗಿಯೂ ಬಯಸುತ್ತಿದ್ದರೆ ಇದು ಅನಿವಾರ್ಯವಾದುದು.

ಹೀಗೆ ಮಾಡುವದೆಂದರೆ ಮನುಷ್ಯನು ಮತ್ತೆ ಕಾಡುಸ್ಥಿತಿಗೆ ಹಿಂದಿರುಗಿದಂತೆಯೇ ಎಂದು ಹಲವು ಪಂಡಿತರು ವಾದಿಸಬಹುದು. ಮಾನವನ ಪ್ರಗತಿಯನ್ನು ಅವನು ಉತ್ಪಾದನೆಗೆ ಉಪಯೋಗಿಸುವ ರೀತಿ-ನೀತಿಗಳ ಮೇಲಿಂದಲೇ ನಿರ್ಣಯಿಸುವದು ತಪ್ಪು. ಯಾಕಂದರೆ ಇಂದು ಮನುಷ್ಯನು ತನ್ನ ವೇಷ ಭೂಷಣಗಳಲ್ಲಿ ಸುಧಾರಿಸುತ್ತಿದ್ದಾನೆ. ತಾನು ಉಪಯೋಗಿಸುವ ವಾಹನಗಳಲ್ಲಿ ಸುಧಾರಿಸಿದ್ದಾನೆ. ಊಟ ಉಡಿಗೆಗಳಲ್ಲಿ ಸುಧಾರಿಸಿದ್ದಾನೆ. ಆದರೆ ತನ್ನ ಮಾನವೀಯತೆಯಲ್ಲಿ ಅವನು ಏನೂ ಸುಧಾರಿಸಿಲ್ಲ. ಪ್ರಾಚೀನ ಕಾಲದಲ್ಲಿ ಅವನು ಎಷ್ಟು ಕ್ರೂರನೂ ನಿರ್ದಯಿಯೂ ಆಗಿದ್ದನೋ ಈಗಲೂ ಅಷ್ಟೇ ಕ್ರೂರನೂ ನಿರ್ದಯಿಯೂ ಆಗಿರುವನು. ಅಷ್ಟೇಕೆ ಅದಕ್ಕೂ ಹೆಚ್ಚು ಕ್ರೂರನೂ ನಿರ್ದಯಿಯೂ ಆಗಿದ್ದಾನೆ. ಇದಕ್ಕೆ ನಿದರ್ಶನವನ್ನು ಹುಡುಕುತ್ತ ಹೋಗುವ ಕಾರಣವೇಇಲ್ಲ. ಈ ಶತಮಾನದ ಪೂರ್ವಾರ್ಧದಲ್ಲಿ ಸಂಭವಿಸಿದ ಎರಡು ಜಾಗತಿಕ ಯುದ್ಧಗಳನ್ನೂ ಅದರಿಂದ ಉಂಟಾದ ನಾಶವನ್ನೂ ಗಮನಿಸಿದರೆ ಸಾಕು. ಈಗಿನ ಮಾನವನ ಜೀವನ ಹಿಂದಿನ ಕಾಡು ಮಾನವನ ಜೀವನದಕಿಂತಲೂ ಹಿಂಸಾಮಯವಾಗಿದೆ, ಕ್ರೂರವಾಗಿದೆ, ನಿರ್ದಯದ್ದಾಗಿದೆ, ಪಾಶವೀಗುಣಗಳದ್ದಾಗಿದೆ ಎಂದು ನಿಸ್ಸಂಶಯವಾಗಿ ಹೇಳಬಹುದು.

ಇಷ್ಟೇ ಅಲ್ಲ ಈಗಿನ ಮಾನವನು ತನ್ನ ಕುಲವನ್ನೇ ನಿರ್ನಾಮ ಮಾಡ ಹೊರಟಿದ್ದಾನೆ. ಅವನು ಜಂಭ ಕೊಚ್ಚಿಕೊಳ್ಳುತ್ತಿರುವ ವಿಜ್ಞಾನದ ಪ್ರಗತಿಯೆಲ್ಲ ಅವನು ಮಾಡಿದ ವಿನಾಶದ ಮುಂದೆ ಏನೂ ಅಲ್ಲ.

ಇದನ್ನು ಲಕ್ಷಿಸಿದಾಗ ವಿಕೇಂದ್ರೀಕರಣದ ಮಹತ್ವವು ತಿಳಿದು ಬರುತ್ತದೆ. ವಿಕೇಂದ್ರೀಕರಣವೆಂದರೆ ಹಳ್ಳಿಯ ಪುನರುದ್ಧಾರ. ಆದುದರಿಂದಲೇ ಇಂದು ಸರ್ವೋದಯ ಸಮಾಜವು ನಿರ್ಮಾಣವಾಗಬೇಕಾದರೆ ಹಳ್ಳಿಗಳ ಉದ್ಧಾರ

ವಾಗಬೇಕು. ಮತ್ತು ಹಳ್ಳಿಗಳ ಉದ್ಧಾರವಾದರೆ ಜಗತ್ತಿನ ಉದ್ಧಾರವೂ ಸಾಧ್ಯವಾಗಬಲ್ಲದು. ಯಾಕಂದರೆ 'Simple living and high thinking' (ಸಾದಾ ಜೀವನ ಮತ್ತು ಉದಾತ್ತ ವಿಚಾರ) ಹಳ್ಳಿಯಲ್ಲಿ ಮಾತ್ರ ಸಾಧ್ಯವಾಗುತ್ತದೆ. ಔದ್ಯೋಗೀಕರಣದ ಆಗರವಾದ ಪಟ್ಟಣದಲ್ಲಿ ಸಾದಾ ಜೀವನ ಮತ್ತು ಉದಾತ್ತ ವಿಚಾರಗಳು ಜೀವನದಲ್ಲಿ ಕಾಣಿಸಿಕೊಳ್ಳಲಾರವು. ಔದ್ಯೋಗೀಕರಣದ ಕೇಂದ್ರವಾದ ಪಟ್ಟಣವು ಒಂದು ಕಾಡು (Jungle) ಎಂದು ಹೇಳಬಹುದು. ಅಲ್ಲಿ ಕರುಣೆಗೆ, ಮಾನವತೆಗೆ, ಸತ್ಯ ಅಹಿಂಸೆಗಳಿಗೆ ಸ್ಥಾನವಿಲ್ಲ. ಅಲ್ಲಿಯ ನಿಯಮವೆಂದರೆ the survival of the fittest (ಬಲಶಾಲಿಯಾದವನೇ ಬಾಳಲು ಯೋಗ್ಯ) ಎಂಬ ಕಾಡಿನಲ್ಲಿರುವ ನಿಯಮ. ಇದರ ಬದಲಾಗಿ To live and let live (ನಾವೂ ಬದುಕೋಣ ಇತರರಿಗೂ ಬದುಕಲು ಅವಕಾಶ ಕೊಡೋಣ) ಎಂಬ ನಿಯಮವನ್ನು ಹಿಡಿದು ಮಾನವ ಕುಲವು ಬಾಳಬೇಕೆಂದಿದ್ದರೆ ಸ್ವಯಂಪೂರ್ಣವಾದ ಹಳ್ಳಿಗಳ ಉದಯವಾಗಬೇಕು. ಸರ್ವೋದಯ ಸಮಾಜದ ನಿರ್ಮಾಣವಾಗಬೇಕು.

# ಭೂದಾನ-ಗ್ರಾಮದಾನ

ಸರ್ವೋದಯ ಸಮಾಜವು ನಿರ್ಮಾಣವಾಗಬೇಕಾದರೆ ಭಾರತದಲ್ಲಿಯೇ ಮೊದಲು ನಿರ್ಮಾಣವಾಗಬೇಕು. ಯಾಕಂದರೆ ಸರ್ವೋದಯ ವಿಚಾರವು ಮೊದಲು ಹುಟ್ಟಿದ್ದು ಭಾರತದಲ್ಲಿ. ಅದರ ಪ್ರಯೋಗ ಭೂಮಿ ಭಾರತವೇ ಆಗಿದೆ. ಆದುದರಿಂದ ಸರ್ವೋದಯ ಸಮಾಜವು ಮೊದಲು ಭಾರತದಲ್ಲಿ ಪರಿಪೂರ್ಣವಾಗಿ ಸಿದ್ಧವಾದಾಗ ಜಗತ್ತಿನ ಇತರೆಡೆಗಳಲ್ಲಿ ಅದರ ಪ್ರಯೋಗ ವನ್ನು ಮಾಡಬಹುದಲ್ಲವೇ ?

ಸರ್ವೋದಯ ಸಮಾಜದ ಅಧಿಷ್ಠಾನವೆಂದರೆ ಹಳ್ಳಿ. ಭಾರತದಲ್ಲಿ ಸರ್ವೋದಯ ಸಮಾಜವು ಹಳ್ಳಿಗಳಲ್ಲಿಯೇ ಬೆಳೆದು ಬರಬಲ್ಲದು.

ಆದರೆ ಭಾರತದ ಹಳ್ಳಿಯ ಆರ್ಥಿಕ ವ್ಯವಸ್ಥೆಯೆಲ್ಲ ಒಕ್ಕಲುತನದ ಮೇಲೆ ನಿಂತಿದೆ. ಒಕ್ಕಲುತನಕ್ಕೆ ಭೂಮಿಯೇ ಆಧಾರ. ಆದುದರಿಂದ ಹಳ್ಳಿಗಳು ಇಂದು ಸುಖ-ಶಾಂತಿಗಳ ಆಗರವಾಗಬೇಕಾದರೆ ಈ ಭೂಮಿಯ ಸಮಸ್ಯೆ ಯನ್ನು ಸಮರ್ಪಕವಾಗಿ ಬಿಡಿಸಲೇಬೇಕು. ಭೂಮಿಯ ಸಮಸ್ಯೆಯನ್ನು ಸಮರ್ಪಕವಾಗಿ ಬಿಡಿಸದಿದ್ದರೆ ಸರ್ವೋದಯ ಸಮಾಜವು ಅಸ್ತಿತ್ವದಲ್ಲಿ ಬರು ವದೇ ಸಾಧ್ಯವಿಲ್ಲ.

ಈ ಸತ್ಯವು ಗಾಂಧೀಜಿಯವರಿಗೆ ಹೊಳೆದಿತ್ತು. ಭಾರತಕ್ಕೆ ಸ್ವಾತಂತ್ರ್ಯವು ಸಿಕ್ಕ ಮೇಲೆ ಈ ಪ್ರಯೋಗವನ್ನು ಅವರು ಮಾಡುವವರಿದ್ದರು. ಆದರೆ ಈ ಪ್ರಯೋಗವನ್ನು ಮಾಡಲು ದೇವರು ಆಯುಷ್ಯವನ್ನು ಕೊಡಲಿಲ್ಲ.

ಈ ವಿಷಯವಾಗಿ ಶ್ರೀ. ಜಯಪ್ರಕಾಶ ನಾರಾಯಣರು ಬಹಳ ಹೃದಯ ಸ್ಪರ್ಶಿಯಾದ ಮಾತುಗಳನ್ನು ಆಡಿದ್ದಾರೆ.

"I decided to withdraw from party and power politics not because of disgust or sense of any personal frustration, but because it became clear to me that politics could not deliver the goods, the goods being the same old goods of equality, freedom, brotherhood, peace.

But was there an alternative to politics? Could society be changed and reconstructed in any other manner than through the agency of the state? Politics is but a science of state.

There was an alternative. Mahatma Gandhi had placed it before us. But, I must admit, it was not clear to me at that time.

Gandhiji had shown us an alternative to armed conflict in the course of our struggle for freedom. And we had followed him ...not so much out of conviction as because his prescription had worked.........

But Gandhiji had no time to give a practical demonstration of his nonviolent technique for changing and reconstructing society. No doubt, he had spoken and written much about it, but before he was able to put it into practice he was cruelly snatched away from our midst. Looking back, it seems clear now that he had already begun to lay the foundations of hie future course of action. But the significance of what he was doing was ehtirely lost upon me as perhaps upon many others, The significance of the fact for instance, that after having led the freedom movement to a brilliant success, he did not take power himself to use it for remaking the country in accordance to his ideals had completely escaped me. Like wise, when he proposed that the congress should withdraw from the field of politics and turn itself into what he called a *Lok Sevak Sangh* the import again of that extra ordinary proposal was lost upon me, Nor had the country a chance to consider that proposal dispassionately, because the grief and anxiety into which it was plunged were too overpowering for clear thought. Besides all eyes were turned to those who, in the absence of the ship's captain, were expected to steer her to safety. And from them not a word came about the Master's "last will and testament".

On top of it all, when it was seen that every one of Gandhiji's political colleagues had taken to traditional path of politics it could not even be suspected that there was in Gandhism an alternative to the method of party and power."

[ ನಾನು ಪಕ್ಷ ಹಾಗೂ ಅಧಿಕಾರಗಳಿಂದೊಡಗೂಡಿದ ರಾಜಕಾರಣದಿಂದ ದೂರಾಗಲು ನಿರ್ಣಯಿಸಿದೆನು. ನನ್ನಲ್ಲಿ ಉಂಟಾದ ಜಿಗುಪ್ಸೆಯಾಗಲೀ, ವೈಯಕ್ತಿಕ ನಿರಾಶೆಯಾಗಲೀ ಈ ನಿರ್ಣಯಕ್ಕೆ ಕಾರಣವಾಗಿರಲಿಲ್ಲ. ರಾಜಕಾರಣವು ನಮಗೆ ಬೇಕಾದ ಸಮಾನತೆ, ಸ್ವಾತಂತ್ರ್ಯ, ಬಂಧುತ್ವ, ಶಾಂತಿಗಳನ್ನು ತಂದುಕೊಡಲಾರದೆಂದು ನನಗೆ ಆದ ಮನವರಿಕೆಯೇ ನಾನು ರಾಜಕಾರಣವನ್ನು ಬಿಡಲು ಕಾರಣವಾಯಿತು.

ಆದರೆ ರಾಜಕಾರಣಕ್ಕೆ ಪ್ರತಿಯಾದ ಬೇರೊಂದು ಉಪಾಯವಿದೆಯೇ ? ರಾಜ್ಯತಂತ್ರದಿಂದಲ್ಲದೇ ಬೇರೆ ವಿಧಾನದಿಂದ ಸಮಾಜವನ್ನೂ ಬದಲಿಸುವದೂ ಪುನರ್ಘಟಿಸುವದೂ ಸಾಧ್ಯವಿದೆಯೇ ? ರಾಜಕಾರಣವೆಂದರೆ ರಾಜ್ಯಶಾಸ್ತ್ರವೇ ಆಗಿದೆ.

ರಾಜಕಾರಣದ ಪ್ರತಿಯಾಗಿ ಇನ್ನೊಂದು ಉಪಾಯವೂ ಇತ್ತು. ಆ ಉಪಾಯವನ್ನು ಮಹಾತ್ಮಾಗಾಂಧೀಜಿಯವರು ನಮ್ಮ ಮುಂದಿಟ್ಟಿದ್ದರು. ಆದರೆ ಅದು ನನಗೆ ಆಗ ಸರಿಯಾಗಿ ತಿಳಿದಿರಲಿಲ್ಲವೆಂದು ನಾನು ಒಪ್ಪಿಕೊಳ್ಳಲೇಬೇಕು.

ನಮ್ಮ ಸ್ವಾತಂತ್ರ್ಯಯುದ್ಧದಲ್ಲಿ ಸಶಸ್ತ್ರ ಹೋರಾಟಕ್ಕೆ ಬದಲಾಗಿ ಅಹಿಂಸಾತ್ಮಕ ಹೋರಾಟವನ್ನು ಗಾಂಧೀಜಿಯವರು ನಮಗೆ ತೋರಿಸಿಕೊಟ್ಟಿದ್ದರು. ಮತ್ತು ಅದನ್ನು ನಾವು ಅರ್ಥಮಾಡಿಕೊಂಡು ಅದರಲ್ಲಿ ಧುಮುಕಿರಲಿಲ್ಲ. ಅದು ಕಾರ್ಯಕಾರಿಯಾಯಿತೆಂದು ಅದರಲ್ಲಿ ಧುಮುಕಿದೆವು............

ಆದರೆ ಸಮಾಜವನ್ನು ಅಹಿಂಸಾತ್ಮಕವಾದ ರೀತಿಯಲ್ಲಿ ಬದಲಿಸುವ ಹಾಗೂ ಪುನರ್ಘಟಿಸುವ ಪ್ರಯೋಗವನ್ನು ಮಾಡಿತೋರಿಸಲು ಗಾಂಧೀಜಿಯವರಿಗೆ ವೇಳೆಯೇ ದೊರೆಯಲಿಲ್ಲ. ಈ ತರದ ಅಹಿಂಸಾತ್ಮ ಬದಲಾವಣೆಯ ರೀತಿ ನೀತಿಗಳ ಬಗ್ಗೆ ಅವರು ಸಾಕಷ್ಟು ಮಾತನಾಡಿದ್ದರು ಹಾಗೂ ಬರೆದಿದ್ದರು. ಅದನ್ನು ಕಾರ್ಯರೂಪದಲ್ಲಿ ತರುವ ಮೊದಲೇ ದೈವವು ಕ್ರೂರತನದಿಂದ ಅವರನ್ನು ನಮ್ಮಿಂದ ಸೆಳೆದೊಯ್ದಿತು. ಹಿಂದೆ ನಡೆದ ಸಂಗತಿಗಳನ್ನು ಈಗ ನೆನಸಿಕೊಂಡರೆ ಗಾಂಧೀಜಿಯವರು ಮುಂದಿನ ಕ್ರಾಂತಿಗೆ ತಳಹದಿಯನ್ನು ಹಾಕತೊಡಗಿದ್ದರೆಂದು ಈಗ ಸ್ಪಷ್ಟವಾಗಿ ಗೋಚರಿಸುವದು. ಆದರೆ ಗಾಂಧೀಜಿಯವರ ಈ ಕೃತಿಗಳ ಮಹತ್ವ ಇನ್ನುಳಿದವರಂತೆ ನನಗೂ ಆಗ ತಿಳಿದು ಬರಲಿಲ್ಲ.

ಉದಾಹರಣೆಗೆ, ನಮ್ಮ ಸ್ವಾತಂತ್ರ್ಯ ಯುದ್ಧವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬಂದ ಮೇಲೆ ತಮ್ಮ ಆದರ್ಶದಂತೆ ದೇಶವನ್ನು ರೂಪಿಸುವದಕ್ಕಾಗಿ ತಮ್ಮ ಕೈಯಲ್ಲಿ ರಾಜಕೀಯ ಅಧಿಕಾರವನ್ನು ಗಾಂಧೀಜಿಯವರು ಏಕೆ ತೆಗೆದುಕೊಳ್ಳಲಿಲ್ಲ ಎಂಬು

ದರ ಅರ್ಥವು ನನಗೆ ಹೊಳೆಯದೇ ಹೋಯಿತು. ಇದೇ ರೀತಿಯಾಗಿ, ಕಾಂಗ್ರೆಸು ರಾಜಕಾರಣದಿಂದ ಹಿಂದೆ ಸರಿಯಬೇಕೆಂದೂ ಮತ್ತು ಅದು ಲೋಕ ಸೇವಕ ಸಂಘವಾಗಿ ಮಾರ್ಪಡಬೇಕೆಂದೂ ಗಾಂಧೀಜಿಯವರು ತಮ್ಮ ವಿಲಕ್ಷಣವಾದ ಸೂಚನೆಯನ್ನು ಮುಂದಿಟ್ಟಾಗಲೂ ಅದರ ಮಹತ್ವ ನನಗೆ ತಿಳಿಯದೇ ಹೋಯಿತು. ನಮ್ಮ ದೇಶವು ಕೂಡ ಆ ಸೂಚನೆಯನ್ನು ನಿರ್ವಿಕಾರ ಮನಸ್ಸಿನಿಂದ ವಿಚಾರಿಸಲು ಅವಕಾಶ ದೊರೆಯಲಿಲ್ಲ. ಯಾಕೆಂದರೆ ಗಾಂಧೀಜಿಯವರ ಮರಣದಿಂದ ಉಂಟಾದ ದುಃಖ ಮತ್ತು ಕಳವಳಗಳು ದೇಶದ ಜನರ ಸುಸ್ಪಷ್ಟವಾದ ವಿಚಾರ ಶಕ್ತಿಯನ್ನೇ ಕುಂದಿಸಿದವು. ಇದಲ್ಲದೆ ಹಡಗದ ಕಪ್ತಾನನು ಕಣ್ಮರೆಯಾಗಲು ಹಡಗವನ್ನು ಸುರಕ್ಷಿತವಾಗಿ ಪಾರು ಮಾಡುವವರ ಕಡೆಗೇ ಎಲ್ಲರ ಲಕ್ಷವೂ ಕೇಂದ್ರೀಕೃತವಾಯಿತು. ಹಡಗವನ್ನು ಸುರಕ್ಷಿತವಾಗಿ ಪಾರು ಮಾಡಲು ಹೊರಟ ಆ ಜನರಿಂದ ತಮ್ಮ ಗುರುವಿನ ಕೊನೆಯ ಇಚ್ಛೆ ಹಾಗೂ ಮೃತ್ಯು ಪತ್ರದ ಬಗ್ಗೆ ಒಂದು ಮಾತೂ ಹೊರಬರಲಿಲ್ಲ. ಇದೆಲ್ಲದಕ್ಕೂ ಕಳಸವಿಟ್ಟಂತೆ ಗಾಂಧೀಜಿಯವರ ರಾಜಕೀಯ ಶಿಷ್ಯರೆಲ್ಲ ಪರಂಪರಾಗತವಾಗಿ ಬಂದ ರಾಜಕಾರಣದ ದಾರಿಯನ್ನೇ ಹಿಡಿದದ್ದರಿಂದ ಗಾಂಧೀ ತತ್ತ್ವಜ್ಞಾನದಲ್ಲಿ ಪಕ್ಷ ಹಾಗೂ ಅಧಿಕಾರ ರಾಜಕಾರಣಗಳಿಗೆ ಬದಲಾಗಿ ಬೇರೊಂದು ಮಾರ್ಗವೂ ಇದೆ ಎಂಬ ಬಗ್ಗೆ ಸಂಶಯ ಕೂಡ ಉಳಿದವರಲ್ಲಿ ಹುಟ್ಟಲು ಅವಕಾಶವಾಗಲಿಲ್ಲ. ]

ಭೂದಾನ ಗ್ರಾಮದಾನಗಳು ಗಾಂಧೀವಾದಕ್ಕೆ ವಿಸಂಗತವಾಗಿರುವವೆಂದೂ ಅವು ವಿನೋಬಾ ಅವರ ಕಲ್ಪನಾಲೋಕದಿಂದ ಬಂದಿರುವವೆಂದೂ ಭಾವಿಸುವವರು ಜಯಪ್ರಕಾಶ ನಾರಾಯಣರ ಈ ಮಾತುಗಳನ್ನು ಓದಿ ನೋಡಬೇಕು. ಗಾಂಧೀಜಿಯವರ ತತ್ತ್ವ ವಿಚಾರಗಳನ್ನೇ ವಿನೋಬಾ ಅವರು ಕಾರ್ಯ ರೂಪದಲ್ಲಿ ತರಲು ಹೊರಟಿದ್ದಾರೆ. ವಿನೋಬಾ ಅವರ ಭೂದಾನ ಯಜ್ಞವು ಪ್ರಾರಂಭವಾಗುವ ಎಷ್ಟೋ ವರುಷ ಮೊದಲೇ ಗಾಂಧೀಜಿಯವರಿಗೆ ಭಾರತದ ಭೂ ಸಮಸ್ಯೆಯು ಅರಿವಾಗಿತ್ತು. ಭೂಮಿಯ ಸಮಸ್ಯೆಯನ್ನು ಬಿಡಿಸದೇ ಗ್ರಾಮರಾಜ್ಯ ರಾಮರಾಜ್ಯ ಸ್ಥಾಪನೆ ಸಾಧ್ಯವಿಲ್ಲವೆಂಬದನ್ನು ಮಹಾತ್ಮರು ಮನಗಂಡಿದ್ದರು. ಅದಕ್ಕಾಗಿ ಅವರು ಜಮೀನುದಾರರಿಗೂ ರೈತರಿಗೂ ಬುದ್ಧಿಯನ್ನು ಹೇಳುತ್ತ ಬಂದಿದ್ದರು. ಆದರ್ಶ ಜಮೀನುದಾರನು ಹೇಗೆ ಇರಬೇಕು ಎಂಬ ಬಗ್ಗೆ ಈ ರೀತಿ ಹೇಳಿದ್ದಾರೆ.

"A model zamindar would at once reduce much of the burden the ryot is now bearing. He would come in intimate touch with the ryots and know their wants and inject hope

into them in the place of despair which is killing the very life out of them. He will not be satisfied with the ryot's ignorance of the laws of sanitation and hygiene. He will reduce himself to poverty in order that the ryots may have the necessaries of life. He will study the economic condition of the ryots under his care, establish schools in which he will educate his own children side by side with those of the ryots. He will purify the village well and the village tank. He will teach the ryot to sweep his roads and clean his latrines by himself doing this necessary labour. He will throw open without reserve his own gardens for the unrestricted use of the ryot. He will use as hospital, school, or the like most of the unnecessary buildings which he keeps for his pleasure If only the capitalist class will read the signs of the times, revise their notions of god-given right to all they possess, in an incredibly short space of time, the seven hundred thousand dung-heaps which to day pass muster as villages can be turned into abodes of peace health and comfort.

—*Young India*
5 12-'29

[ ಈಗ ಸದ್ಯ ರೈತನ ಮೇಲೆ ಬಿದ್ದಿರುವ ಭಾರವನ್ನು ಮಾದರಿ ಜಮೀನುದಾರನು ಕೂಡಲೇ ಕಡಿಮೆ ಮಾಡುವನು. ಅವನು ರೈತರ ಕೂಡ ನಿಕಟವಾದ ಸಂಬಂಧವನ್ನು ಬೆಳೆಯಿಸುವನು. ಅವರ ಬೇಡಿಕೆಗಳನ್ನು ತಿಳಿದುಕೊಳ್ಳುವನು ಮತ್ತು ಅವರ ಪ್ರಾಣವನ್ನು ಹಿಂಡುತ್ತಿರುವ ನಿರಾಶೆಯನ್ನು ಕಳೆದು ಅವರಲ್ಲಿ ಒಳ್ಳೆಯ ಭವಿಷ್ಯದ ಆಶೆಯನ್ನು ತುಂಬುವನು. ಕಾಯದೆ ಕಾನೂನುಗಳ ಬಗ್ಗೆ, ಆರೋಗ್ಯ ನಿಯಮಗಳ ಬಗ್ಗೆ ರೈತರಲ್ಲಿ ನೆಲೆಸಿರುವ ಅಜ್ಞಾನವನ್ನು ಕಂಡು ಅವನು ಸಂತೋಷಪಡಲಾರನು. ರೈತರಿಗೆ ಜೀವನಾವಶ್ಯಕವೆನಿಸಿರುವ ಪದಾರ್ಥಗಳನ್ನು ಒದಗಿಸಿಕೊಡಲು ತಾನು ಬಡತನವನ್ನು ಅಪ್ಪುವನು. ತನ್ನ ಆಧೀನದಲ್ಲಿರುವ ರೈತರ ಆರ್ಥಿಕ ಪರಿಸ್ಥಿತಿಯನ್ನು ಅವನು ಅಭ್ಯಾಸಮಾಡುವನು. ಮತ್ತು ಶಾಲೆಗಳನ್ನು ಸ್ಥಾಪಿಸಿ ತನ್ನ ಮಕ್ಕಳ ಕೂಡ ರೈತರ ಮಕ್ಕಳನ್ನು ಕುಳ್ಳಿರಿಸಿ ಅವರನ್ನು ಸುಶಿಕ್ಷಿತರನ್ನಾಗಿ ಮಾಡುವನು. ಹಳ್ಳಿಯಲ್ಲಿರುವ ಕೆರೆ ಬಾವಿಗಳನ್ನು ಬಳಿಸಿ ಸ್ವಚ್ಛ ಮಾಡಿಸುವನು. ತಾನು ಸ್ವತಃ ಬೀದಿಗಳನ್ನು ಉಡುಗಿ, ಶೌಚಕೂಪಗಳನ್ನು ಬಳಿದು ತನ್ನ

ರೈತರಿಗೆ ತಮ್ಮ ತಮ್ಮ ಬೀದಿಗಳನ್ನು ಉಡುಗಿಕೊಳ್ಳುವಂತೆ ಶೌಚಕೂಪಗಳನ್ನು ಬಳಿಯುವಂತೆ ಶಿಕ್ಷಣ ಕೊಡುವನು. ತನ್ನ ಉದ್ಯಾನಗಳನ್ನು ರೈತರ ಉಪಯೋಗಕ್ಕಾಗಿ ಅನಿರ್ಬಂಧವಾಗಿ ತೆರೆದಿಡುವನು. ತನ್ನ ಸ್ವಂತದ ಸುಖವಿಲಾಸಗಳಿಗಾಗಿ ಅನಾವಶ್ಯಕವಾಗಿಟ್ಟುಕೊಂಡ ಕಟ್ಟಡಗಳನ್ನು ಶಾಲೆಗಾಗಿಯೋ ಔಷಧಾಲಯಕ್ಕಾಗಿಯೋ ಉಪಯೋಗಿಸುವನು. ಬಂಡವಲುದಾರ ವರ್ಗವು ಕಾಲಗತಿಯಲ್ಲಿ ಉಂಟಾದ ಬದಲಾವಣೆಯನ್ನು ಅರ್ಥ ಮಾಡಿಕೊಂಡು ತಮ್ಮ ಒಡೆತನದಲ್ಲಿದ್ದುವೆಲ್ಲದರ ಮೇಲೆ ತಮಗೆ ದೈವದತ್ತ ಅಧಿಕಾರವಿದೆ ಎಂಬ ವಿಚಾರವನ್ನು ಬದಲು ಮಾಡಿದರೆ ಇಂದು ಹಳ್ಳಿಗಳೆಂದು ಕರೆಯಿಸಿಕೊಳ್ಳಲ್ಪಡುತ್ತಿರುವ ಏಳು ಲಕ್ಷ ಸೆಗಣಿಯ ಗುಂಪಿಗಳಾಗಿರುವ ಸ್ಥಾನಗಳು ತೀರ ತುಸು ಕಾಲಾವಧಿಯಲ್ಲಿಯೇ ಶಾಂತಿ, ಆರೋಗ್ಯ ಹಾಗೂ ಸೌಖ್ಯಗಳ ಸ್ಥಾನಗಳಾಗಿ ಪರಿವರ್ತನೆ ಹೊಂದಬಲ್ಲವು.

ಯಂಗ್ ಇಂಡಿಯಾ ೫–೧೨–೨೯ ]

ಹೀಗೆ ಜಮೀನುದಾರರು ರೈತರನ್ನು ತಮ್ಮ ಗುಲಾಮರೆಂದು ಭಾವಿಸದೇ ತಮ್ಮ ಬಂಧುಗಳೆಂದು ಭಾವಿಸಿ ನಡೆಯಬೇಕೆಂದೂ ಜಮೀನುದಾರರು ಈ ರೀತಿ ಬಂಧು ಭಾವದಿಂದ ನಡೆದರೆ ರೈತ ಜಮೀನುದಾರರಲ್ಲಿ ಜಗಳ ಉಂಟಾಗುವ ಕಾರಣವೇ ಇಲ್ಲದಂತಾಗುವದೆಂದೂ ಗಾಂಧೀಜಿಯವರು ಉಪದೇಶಮಾಡಿದರು.

ಜಮೀನುದಾರರಿಗೆ ಉಪದೇಶ ಮಾಡಿದಂತೆ ರೈತರಿಗೂ ಗಾಂಧೀಜಿಯವರು ಉಪದೇಶ ಮಾಡಿದ್ದಾರೆ.

" The peasants must reject the doctrine that their holdings are absolutely theirs to the exclusion of the zamindars. They are or should be members of a joint family in which the zamindar is the head guarding their rights against encroachment. Whatever the law may be, the zamindari to be defensible must approach the conditions of a joint family. "

—*Young India* 28-5-'31

[ ತಾವು ಹಿಡಿದಿರುವ ಭೂಮಿಗಳೆಲ್ಲ ಸಂಪೂರ್ಣವಾಗಿ ತಮ್ಮವೇ ಆಗಿವೆ, ಅವು ಜಮೀನುದಾರರಿಗೆ ಸೇರಿಲ್ಲ ಎಂಬ ಸಿದ್ಧಾಂತವನ್ನು ರೈತರು ಬಿಟ್ಟು ಕೊಡಬೇಕು. ಇನ್ನೊಬ್ಬರ ಆಕ್ರಮಣದಿಂದ ತಮ್ಮ ಹಕ್ಕುಗಳನ್ನು ರಕ್ಷಿಸುವ ಜಮೀನುದಾರನು ಯಜಮಾನನಾಗಿರುವ ಅವಿಭಕ್ತ ಕುಟುಂಬದ ಸದಸ್ಯರಾಗಿ ಈ ರೈತರು ಇರಬೇಕು. ಕಾಯದೆಯು ಏನೇ ಹೇಳಲಿ ಜಮೀನುದಾರಿಯು ತನ್ನ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳಬೇಕಾದರೆ ಅದು ಅವಿಭಕ್ತ ಕುಟುಂಬದ ಮಟ್ಟಕ್ಕೆ ಬರಬೇಕು.

ಯಂಗ್ ಇಂಡಿಯಾ ೨೮–೫–೩೧ ]

ಭೂಮಿಯ ಸಮಸ್ಯೆಯು ಕಾಯದೇ ಕಾನೂನುಗಳಿಂದ ಬಿಡುವಂಥದಲ್ಲವೆಂದೂ ಅದನ್ನು ಮಾನವೀಯ ದೃಷ್ಟಿಕೋನದಿಂದ ಮಾತ್ರವೇ ಬಿಡಿಸಲು ಸಾಧ್ಯವಿದೆ ಎಂದೂ ಅವರು ನಂಬಿ ಆ ಪ್ರಕಾರ ರೈತರಿಗೂ ಜಮೀನುದಾರರಿಗೂ ಉಪದೇಶವನ್ನು ಮಾಡಿದರು. ಇಂದಿನ ಹೊಲ ಸಾಗುವಳಿ ಕಾಯದೆ (Tenancy Act) ಗಳಿಂದ ಭೂಮಿಯ ಸಮಸ್ಯೆಯನ್ನು ಬಿಡಿಸಲು ಸಾಧ್ಯವಾಗಿಲ್ಲವೆಂಬವನ್ನು ಲಕ್ಷಕ್ಕೆ ತಂದಾಗ ಮಹಾತ್ಮರ ಈ ಉಪದೇಶದ ಮಹತ್ವವು ತಿಳಿಯುತ್ತದೆ. ರೈತರ ಹಾಗೂ ಜಮೀನುದಾರರ ಹೃದಯ ಪರಿವರ್ತನೆಯಿಂದ ಭೂಮಿಯ ಸಮಸ್ಯೆಯನ್ನು ಬಿಡಿಸಲು ಮಹಾತ್ಮರು ಹವಣಿಸಿದ್ದರು. ಭೂದಾನ ಯಜ್ಞದ ತಳಹದಿಯಾದರೂ ಹೃದಯ ಪರಿವರ್ತನೆಯೇ ಆಗಿದೆ ಎಂಬುದನ್ನು ನೆನೆದರೆ ಭೂದಾನ ಗ್ರಾಮದಾನಗಳು ಗಾಂಧೀಜಿಯವರ ವಿಚಾರ ವೃಕ್ಷದ ಫಲಗಳಾಗಿವೆ ಎಂಬುದನ್ನು ಅರಿಯಲು ಬಹಳ ಹೊತ್ತು ಹಿಡಿಯಲಾರದು.

ಈ ಹೃದಯ ಪರಿವರ್ತನೆಯು ಉಂಟಾಗಬೇಕಾದರೆ ಭೂಮಿಯ ಒಡೆತನದ ಬಗ್ಗೆ ಇರುವವಾದ ವಿವಾದ ಇಲ್ಲದಾಗಬೇಕು. ಭೂಮಿಗೆ ಒಡೆಯನು ರೈತನೋ ಜಮೀನುದಾರನೋ ? ಎಂಬ ಪ್ರಶ್ನೆಯನ್ನು ಬಿಡಿಸಿದರೆ ಭೂಮಿಯ ಸಮಸ್ಯೆ ತೀವ್ರವಾಗಿ ಬಗೆಹರಿಯುವದು. ಈ ಸಮಸ್ಯೆಯನ್ನು ಬಿಡಿಸಲು ಗಾಂಧೀಜಿಯವರು ಒಂದು ಸರಳವಾದ ಉಪಾಯವನ್ನು ಹೇಳಿದರು. ಭೂಮಿಯು ರೈತನದೂ ಅಲ್ಲ ಜಮೀನುದಾರನದೂ ಅಲ್ಲ. ಅದು ದೇವರದ್ದು. ಆದುದರಿಂದ ತಾನು ಒಡೆಯ ತಾನು ಒಡೆಯ ಎಂದು ಜಮೀನುದಾರನೂ ರೈತನೂ ಒಬ್ಬರೊಬ್ಬರ ತಲೆಯೊಡೆಯ ಕೂಡದು ಎಂದು ಗಾಂಧೀಜಿಯವರು ಹೇಳಿದರು. ಈ ಬಗ್ಗೆ ಅವರು ಹೀಗೆ ಬರೆದಿದ್ದಾರೆ.

"Real socialism has been handed down to us by our ancestors who taught: 'All land belongs to Gopal, where then is the boundary line? Man is the maker of that line and he can therefore unmake it' Gopal literally means shepherd: it also means God. In modern language it means the State i.e. the People. That the land today does not belong to the people

is too true. But the fault is not in the teaching It is in us who have not lived up to it

I have no doubt that we can make as good an approach to it as is possible for any nation, not excluding Russia and that without violence.

—*Harijan* 2-1-'37

[ ನಮ್ಮ ಪೂರ್ವಜರು ನಮಗೆ ನಿಜವಾದ ಸಮಾಜವಾದವನ್ನು ನೀಡಿಹೋಗಿದ್ದಾರೆ. ಅವರು ಕಲಿಸುತ್ತಿದ್ದುದೇನಂದರೆ ಎಲ್ಲ ಭೂಮಿಯೂ ಗೋಪಾಲನಿಗೆ ಸೇರಿದುದಾಗಿದೆ. ಆದುದರಿಂದ ಸೀಮೆಯಗೆರೆ ಎಲ್ಲಿ ಇದೆ ? ಮನುಷ್ಯನೇ ಸೀಮೆಯ ಗೆರೆಯನ್ನು ಎಳೆಯುವವನಾಗಿದ್ದಾನೆ. ಆದುದರಿಂದ ಮಾನವನು ಆ ಸೀಮೆಯ ಗೆರೆಯನ್ನು ಅಳಿಸಿ ಬಿಡಬಲ್ಲನು. ಗೋಪಾಲ ಎಂಬುದರ ಶಬ್ದಶಃ ಅರ್ಥವು ದನಗಾಹಿ ಎಂದು ಆಗುತ್ತದೆ. ಮತ್ತು ದೇವರು ಎಂಬ ಅರ್ಥವೂ ಅದಕ್ಕೆ ಇದೆ. ಆಧುನಿಕ ಭಾಷೆಯಲ್ಲಿ ಆ ಶಬ್ದವು ರಾಷ್ಟ್ರ ಅಥವಾ ಜನತೆ ಎಂಬ ಅರ್ಥವನ್ನು ಕೊಡುತ್ತದೆ. ಭೂಮಿಯು ಇಂದು ಜನತೆಗೆ ಸೇರಿಲ್ಲ ಎಂಬ ಮಾತು ಅತ್ಯಂತ ಸತ್ಯವಾಗಿದೆ. ಈ ತಪ್ಪು ನಮ್ಮ ಪೂರ್ವಜರು ಮಾಡಿದ ಉಪದೇಶದಲ್ಲಿಲ್ಲ. ಆ ತತ್ತ್ವದಂತೆ ನಡೆಯದಿದ್ದ ನಮ್ಮಲ್ಲಿಯೇ ಈ ತಪ್ಪು ಇದೆ.

ಈ ಉಪದೇಶದಂತೆ ನಡೆಯಲು ಯಾವದೇ ರಾಷ್ಟ್ರಕ್ಕೆ—ರಶಿಯವನ್ನು ಒಳಗೊಂಡು ಸಾಧ್ಯವಿರುವ ಒಳ್ಳೆಯ ಯತ್ನಗಳನ್ನೆಲ್ಲ ಅಹಿಂಸಾತ್ಮಕವಾಗಿ ಕೈಕೊಳ್ಳಲು ನಾವು ಸಮರ್ಥರಾಗಿದ್ದೇವೆಂಬುದರಲ್ಲಿ ಸಂದೇಹವೇ ಇಲ್ಲ.

ಹರಿಜನ ೨-೧-೩೭ ]

ಹೀಗೆ ಭೂಮಿಯ ಸಮಸ್ಯೆಯನ್ನು ಹೇಗೆ ಬಿಡಿಸಬೇಕೆಂಬ ಬಗ್ಗೆ ಗಾಂಧೀಜಿಯವರು ತಮ್ಮ ವಿಚಾರಗಳನ್ನು ಮಂಡಿಸಿದ್ದರೂ ಅವುಗಳನ್ನು ಪ್ರತ್ಯಕ್ಷವಾದ ಕೃತಿಯಲ್ಲಿ ತರಲು ಸಾಧ್ಯವಾಗಲಿಲ್ಲ.

ಗಾಂಧೀಜಿಯವರ ಮರಣದ ನಂತರ ಸರ್ವೋದಯ ಸಮಾಜವು ಸೇವಾಗ್ರಾಮದಲ್ಲಿ ಸ್ಥಾಪಿಸಲ್ಪಟ್ಟಿತು. ಅದರ ಬಗ್ಗೆ ಇದೇ ಪುಸ್ತಕದಲ್ಲಿ ಸರ್ವೋದಯ ಪ್ರವರ್ತನೆ ಎಂಬ ಪ್ರಕರಣದಲ್ಲಿ ವಿವರಿಸಲಾಗಿದೆ.

ಈ ಸರ್ವೋದಯ ಸಮಾಜವು ಪ್ರತಿವರ್ಷ ಸಮ್ಮೇಲನವನ್ನು ನೆರೆಯಿಸಬೇಕೆಂದು ಗೊತ್ತುಮಾಡಲ್ಪಟ್ಟಿತ್ತು. ಅದರಂತೆ ಎಪ್ರಿಲ ೧೯೫೧ ರಲ್ಲಿ ಹೈದರಾಬಾದ ಸಮೀಪದಲ್ಲಿಯ ಶಿವರಾಮಪಲ್ಲಿಯಲ್ಲಿ ಸರ್ವೋದಯ ಸಮ್ಮೇಲನವು ನೆರೆಯುವದಿತ್ತು. ಅದಕ್ಕೆ ಆಚಾರ್ಯ ವಿನೋಭಾ ಭಾವೆಯವರು ಕಾಲು ನಡೆಯಿಂದ ವರ್ಧಾದಿಂದ ಹೊರಟರು.

ಆ ವೇಳೆಗೆ ಹೈದರಾಬಾದದ ತೆಲಂಗಾಣ ವಿಭಾಗದಲ್ಲಿ ಕಮ್ಯುನಿಸ್ಟರಿಗೂ ಜಮೀನುದಾರರಿಗೂ ಭೂಮಿಯ ಸಲುವಾಗಿ ಭೀಕರ ಕದನವೇ ನಡೆದಿತ್ತು. ಈ ಕದನವನ್ನು ನಿಲ್ಲಿಸಲು ಹೈದರಾಬಾದ ಸರಕಾರವು ಪೋಲೀಸ ದಳವನ್ನು ಕಳಿಸಿತ್ತು. ಆದರೂ ಈ ಕದನವು ನಿಲ್ಲದೇ ಸಾಗಿತ್ತು. ಕಮ್ಯುನಿಸ್ಟರು ಹಾಗೂ ಪೋಲೀಸರು ಇನರಿಬ್ಬರ ನಡುವೆ ಸಿಕ್ಕು ಹಳ್ಳಿಯ ಜನ ಹಣ್ಣಾಗಿತ್ತು.

ಭೂಮಿಯ ಸಲುವಾಗಿ ನಡೆದ ಈ ಕದನವನ್ನು ಆಚಾರ್ಯ ವಿನೋಭಾ ಭಾವೆಯವರು ಪ್ರಾರಂಭದಿಂದಲೂ ನಿರೀಕ್ಷಿಸುತ್ತ ಬಂದಿದ್ದರು. ಇದಕ್ಕೆ ಪರಿಹಾರವನ್ನು ಹೇಗೆ ಕಂಡು ಹಿಡಿಯಬೇಕೆಂದು ವಿಚಾರಿಸುತ್ತಲೇ ಇದ್ದರು. ಗಾಂಧೀಜಿಯವರು ಭೂ ಸಮಸ್ಯೆಯನ್ನು ಬಿಡಿಸುವ ಮಾರ್ಗವನ್ನು ಸೂಚಿಸಿದ್ದರೂ ಅದನ್ನು ಕಾರ್ಯರೂಪದಲ್ಲಿ ಹೇಗೆ ತರಬೇಕೆಂಬದು ಇನ್ನೂ ವಿನೋಬಾ ಅವರಿಗೆ ಹೊಳೆದಿರಲಿಲ್ಲ. ಈ ವಿಚಾರವನ್ನೇ ಮೆಲಕು ಹಾಕುತ್ತ ಅವರು ವರ್ಧಾದಿಂದ ೩೦೦ ಮೈಲು ದೂರದಲ್ಲಿರುವ ಶಿವರಾಮಪಲ್ಲಿಗೆ ಕಾಲು ನಡೆಯಿಂದ ಸಾಗಿದ್ದರು. ಒಂದು ದಿನ ಅವರಿಗೆ ಒಮ್ಮೆಲೇ ಭೂದಾನದ ವಿಚಾರವು ಹೊಳೆಯಿತು. ಅದನ್ನು ಅವರೇ ಹೀಗೆ ಬಣ್ಣಿಸಿದ್ದಾರೆ.

"This happened to me as I walked to Shivarampalli from Wardha. All the way I was seeking a solution of the prob'em which communists tried to solve in their own way. One day, the story of the Vamana incarnation flashed through my mind, and Brahman that I was, I took it up and commenced begging gifts of land."

[ ನಾನು ವರ್ಧಾದಿಂದ ಶಿವರಾಮಪಲ್ಲಿಗೆ ನಡೆದುಹೋಗುವಾಗ ಇದು ಸಂಭವಿಸಿತು. ಕಮ್ಯುನಿಸ್ಟರು ತಮ್ಮದೇ ಆದ ರೀತಿಯಲ್ಲಿ ಈ ಸಮಸ್ಯೆಗೆ ಪರಿಹಾರವನ್ನು ಕಂಡು ಹಿಡಿಯಲು ಯತ್ನಿಸುತ್ತಿದ್ದರು. ನಾನೂ ಇದೇ ಸಮಸ್ಯೆಗೆ ನನ್ನ ರೀತಿಯಲ್ಲಿ ಪರಿಹಾರವನ್ನು ಹುಡುಕಲು ವಿಚಾರ ಮಾಡುತ್ತಲೇ ಮಾರ್ಗ ಕ್ರಮಣ ಮಾಡಿದೆ. ಒಂದು ದಿನ ವಾಮನಾವತಾರದ ಕತೆ ನನ್ನ ಮನಸ್ಸಿನ ಮುಂದೆ ಹೊಳೆದು ಹೋಯಿತು. ನಾನೂ ಬ್ರಾಹ್ಮಣನೇ ಆದುದರಿಂದ ವಾಮನನು ಭೂಮಿಯನ್ನು ದಾನಬೇಡಿದಂತೆ ನಾನು ಏಕೆ ಬೇಡಬಾರದು ಎಂಬ ವಿಚಾರ ಹೊಳೆಯಿತು. ಕೂಡಲೇ ನಾನು ಭೂಮಿಯ ದಾನವನ್ನು ಕೇಳ ತೊಡಗಿದೆ. ]

ಈ ಭೂದಾನ ವಿಚಾರವು ಬಂದ ಕೂಡಲೇ ಅವರು ಅದನ್ನು ಕಾರ್ಯ ರೂಪದಲ್ಲಿ ತರಲು ಪ್ರಯತ್ನಿಸಿದರು. ಯಾಕಂದರೆ ತೆಲಂಗಾಣದ ಭೂಸಮಸ್ಯೆ ಸರ್ವೋದಯ ಸಮ್ಮೇಲನಕ್ಕೆ ಬಂದ ಎಲ್ಲರನ್ನೂ ವಿಚಾರ ಮಾಡಹಚ್ಚಿತ್ತು. ಈ ಸಮಸ್ಯೆಯನ್ನು ಅಹಿಂಸೆ ಪ್ರೀತಿಗಳಿಂದ ಬಿಡಿಸಲು ಸಾಧ್ಯವಿಲ್ಲವೇ ಎಂಬ ಪ್ರಶ್ನೆ ಎಲ್ಲರನ್ನೂ ಕಾಡಿತ್ತು. ಈ ಪ್ರಶ್ನೆಗೆ ಉತ್ತರ ಹುಡುಕಲು ವಿನೋಬಾ ಅವರು ೧೬ ನೆಯ ಎಪ್ರಿಲ ೧೯೫೧ ರಲ್ಲಿ ತೆಲಂಗಾಣದ ಪಾದಯಾತ್ರೆಯನ್ನು ಪ್ರಾರಂಭಿಸಿದರು. ತೆಲಂಗಾಣದ ನಲಗೊಂಡಾ ಜಿಲ್ಹೆಯ ಪೋಚಂಪಲ್ಲಿಯಲ್ಲಿ ೧೮-೪ ೧೯೫೧ ನೆಯ ದಿನ ಮೊಟ್ಟ ಮೊದಲಿಗೆ ೧೦೦ ಎಕರೆ ಭೂಮಿಯು ವಿನೋಬಾರಿಗೆ ಶ್ರೀ ರಾಮಚಂದ್ರ ರೆಡ್ಡಿಯವರಿಂದ ದಾನವಾಗಿ ಬಂದಿತು. ಎರಡೇ ತಿಂಗಳಲ್ಲಿ ತೆಲಂಗಾಣದಲ್ಲಿ ಅವರಿಗೆ ೧೨೦೦೦ ಎಕರೆ ಭೂಮಿದಾನವಾಗಿ ದೊರೆಯಿತು. ತೆಲಂಗಾಣದಲ್ಲಿ ಭೂಮಿ ದಾನವಾಗಿ ದೊರೆಯಲು ರಾಜಕೀಯ ಹಾಗೂ ಸಾಮಾಜಿಕವಾದ ವಿಶಿಷ್ಟ ಕಾರಣಗಳಿದ್ದವು. ಆದುದರಿಂದ ಈ ವಿಶಿಷ್ಟ ಕಾರಣಗಳಿಲ್ಲದ ಸ್ಥಳದಲ್ಲಿ ತಮ್ಮ ಪ್ರಯೋಗವು ಯಶಸ್ವಿಯಾಗುವದೋ ಹೇಗೆ ನೋಡಬೇಕೆಂದು ವಿನೋಬಾ ಅವರು ಬಯಸಿದರು.

ವರ್ಧಾದಿಂದ ದಿಲ್ಲಿಗೆ ಹೊರಟಾಗ ಎರಡೇ ತಿಂಗಳಲ್ಲಿ ಅವರಿಗೆ ೧೮೦೦೦ ಎಕರೆ ಭೂಮಿ ದಾನವಾಗಿ ದೊರೆಯಿತು. ಮುಂದೆ ಉತ್ತರ ಪ್ರದೇಶದಲ್ಲಿ ಒಂದು ಲಕ್ಷ ಎಕರೆ ಹಾಗೂ ಬಿಹಾರದಲ್ಲಿ ೨೫ ಲಕ್ಷದಕಿಂತಲೂ ಹೆಚ್ಚಿಗೆ ಭೂಮಿ ದಾನವಾಗಿ ದೊರೆಯಿತು. ಇಂದು ಕೋಟಿಗಟ್ಟಲೆ ಎಕರೆ ಭೂಮಿ ದಾನವಾಗಿ ಬಂದಿದೆ. ಈ ಭೂಮಿಯನ್ನು ಭೂಮಿಯಿಲ್ಲದವರಿಗೆ ಹಂಚಲಾಗುತ್ತದೆ.

ಭೂದಾನದ ಹಿಂದೆಯೇ ಗ್ರಾಮದಾನವೂ ಪ್ರಾರಂಭವಾಯಿತು. ೧೯೫೨ ರ ಮೇ ತಿಂಗಳಲ್ಲಿ ಉತ್ತರ ಪ್ರದೇಶದ ಹಮೀರಪುರ ಜಿಲ್ಲೆಯ ಮಂಗರೋಠ ಎಂಬಲ್ಲಿ ಮೊಟ್ಟ ಮೊದಲು ಗ್ರಾಮದಾನವು ಪ್ರಾರಂಭವಾಯಿತು. ಈ ಹಳ್ಳಿಯಲ್ಲಿ ೧೦೭ ಕುಟುಂಬಗಳು ವಾಸಿಸುತ್ತಿದ್ದವು. ಅವುಗಳಲ್ಲಿ ೬೭ ಕುಟುಂಬದ ಜನರು ಭೂಮಿ ಇದ್ದವರೂ ಉಳಿದ ೪೦ ಕುಟುಂಬದ ಜನರು ಭೂಮಿಯಿಲ್ಲದವರೂ ಆಗಿದ್ದರು. ಎಲ್ಲ ಜನರೂ ವಿನೋಬಾರ ಭಾಷಣವನ್ನು ಕೇಳಲು ಬಂದು ಗೂಡಿದ್ದರು. ಅಲ್ಲಿ ವಿನೋಬಾ ಭಾಷಣವನ್ನು ಮಾಡುತ್ತ ಭೂಮಿ

ಯೆಲ್ಲ ದೇವರಿಗೆ ಸೇರಿದ್ದು ಎಂಬ ಮಾತನ್ನು ಮನಂಬುಗುವಂತೆ ವಿವರಿಸಿದರು. ಅದರ ಪರಿಣಾಮವಾಗಿ ಭೂಮಿಯುಳ್ಳ ೬೭ ಕುಟುಂಬದ ಜನರು ತಮ್ಮ ಎಲ್ಲ ಭೂಮಿಯನ್ನು ವಿನೋಬಾರಿಗೆ ಅರ್ಪಿಸಿ ಊರಿನ ಎಲ್ಲ ಭೂಮಿಯನ್ನು ಅದೇ ಊರಿನ ಎಲ್ಲ ಕುಟುಂಬಗಳಲ್ಲಿ ಹಂಚಿಕೊಡಲು ಬಿನ್ನವಿಸಿದರು. ಮತ್ತು ಇಡೀ ಊರಿಗೆ ಊರೇ ಒಂದು ಕುಟುಂಬದಂತೆ ಬಾಳತೊಡಗಿದರು. ಇದುವೇ ಗ್ರಾಮದಾನದ ಮೊದಲನೆಯ ಉದಾಹರಣೆ. ಇದಾದ ಮೇಲೆ ಬಿಹಾರದಲ್ಲಿ ಹದಿಮೂರು ಉತ್ಕಲದಲ್ಲಿ ಇಪ್ಪತ್ತಮೂರು ಗ್ರಾಮಗಳು ದಾನವಾಗಿಬಂದವು ಆದರೆ ಕ್ರಮವಾಗಿ ಉತ್ಕಲ ಪ್ರಾಂತದಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಹಳ್ಳಿಗಳು ದಾನವಾಗಿ ದೊರೆತವು. ಈಗ ಭಾರತದಲ್ಲಿ ಸಾವಿರಗಟ್ಟಲೆ ಹಳ್ಳಿಗಳು ಗ್ರಾಮದಾನವಾಗಿ ಬಂದಿವೆ.

ಇದಲ್ಲದೆ ಶ್ರಮದಾನ ಸಂಪತ್ತಿದಾನ ಜೀವನದಾನಗಳೂ ಬಳಕೆಯಲ್ಲಿ ಬಂದವು.

ಭೂದಾನ, ಶ್ರಮದಾನ, ಸಂಪತ್ತಿದಾನ, ಜೀವನದಾನ, ಗ್ರಾಮದಾನ ಈ ಎಲ್ಲ ದಾನಗಳ ಉದ್ದೇಶವು ಸರ್ವೋದಯ ಸಮಾಜವನ್ನು ನಿರ್ಮಿಸಲು ಬೇಕಾದ ವಾತಾವರಣವನ್ನು ಉಂಟು ಮಾಡುವದೇ ಆಗಿದೆ.

ಸರ್ವೋದಯ ಸಮಾಜವನ್ನು ನಿರ್ಮಾಣ ಮಾಡಲು ಹಳ್ಳಿಯನ್ನೇ ಘಟಕವನ್ನಾಗಿ ಮಾಡಿಕೊಳ್ಳಲಾಗಿದೆ. ಹಳ್ಳಿಯನ್ನೇ ಏಕೆ ಘಟಕವನ್ನಾಗಿ ಮಾಡಿಕೊಳ್ಳಲಾಯಿತು ಎಂಬದಕ್ಕೆ ವಿನೋಬಾ ಅವರು ಕೆಳಗಿನ ಬಹಳ ಮಹತ್ವದ ಕಾರಣಗಳನ್ನು ಕೊಟ್ಟಿದ್ದಾರೆ.

೧) ಸರ್ವೋದಯ ಸಮಾಜದ ವ್ಯವಸ್ಥೆ ಸರ್ವಾತ್ಮಕ ವ್ಯವಸ್ಥೆ. ಜೀವನ ಅವಿಭಾಜ್ಯ. ಜೀವನದ ಯಾವದೇ ಅಂಶವನ್ನು ಬೇರ್ಪಡಿಸಿ ಸರ್ವೋದಯದ ವಿಷಯವನ್ನು ಯೋಚಿಸುವದು ಸಾಧ್ಯವಿಲ್ಲ. ನೈತಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಎಲ್ಲ ಕ್ಷೇತ್ರಗಳಲ್ಲಿಯೂ ಸಮತೆಯ ಸ್ಥಾಪನೆಯೇ ಸರ್ವೋದಯದ ಗುರಿ. ಈ ಸಮತೆಯ ಮೂಲ ಆತ್ಮದ ಏಕತೆ. ಕುಟುಂಬದಲ್ಲಿ ಸಮತೆಯ ಇದೇ ಆದರ್ಶವು ಪ್ರತಿಷ್ಠಿತವಾಗಿದೆ. ಕುಟುಂಬದಲ್ಲಿ ತಾಯಿ ಮಕ್ಕಳಲ್ಲಿ, ತಂದೆ ಮಕ್ಕಳ ನಡುವೆ, ಗಂಡಹೆಂಡತಿಯರಲ್ಲಿ, ಇದೇ ಏಕಾತ್ಮಕ ಪ್ರಜ್ಞೆ ಇದೆ. ಅಲ್ಲಿ ಯಾರ ಯೋಗ್ಯತೆ ಏನೇ ಇರಲಿ, ಎಲ್ಲರ ಜೀವನ

ಯಾತ್ರೆಯೂಮಾನ ಒಂದೇ ರೀತಿಯದು. ಕುಟುಂಬದಲ್ಲಿ ಗ್ರಹಿಸಿರುವ ಏಕತೆಯ ಸಮತೆಯ ಪಾಠವನ್ನು ಇಡೀ ಸಮಾಜದಲ್ಲೇ ಪ್ರಸಾರ ಮಾಡುವದು ಸರ್ವೋದಯದ ಉದ್ದೇಶ. ಕುಟುಂಬವನ್ನು ಬಿಟ್ಟರೆ ಹಳ್ಳಿಯೇ ಮನುಷ್ಯನಿಗೆ ಎಲ್ಲಕ್ಕಿಂತ ನಿಕಟ. ಅಂತಲೇ ಏಕಾತ್ಮ ಪ್ರಜ್ಞೆಯನ್ನು ಕುಟುಂಬದಿಂದ ನೆರೆ ಹೊರೆಯ ತನಕ ಎಂದರೆ ಹಳ್ಳಿಯ ತನಕ ಹಬ್ಬಿಸುವದು ಮನುಷ್ಯನಿಗೆ ಎಲ್ಲ ಕ್ಕಿಂತ ಸಹಜ.

೨) ಶಾಸನ ರಹಿತ ಸಮಾಜ ವ್ಯವಸ್ಥೆಯತ್ತ ಮುಂದೆ ಸಾಗಲು ಶಕ್ತಿಯ ವಿಕೇಂದ್ರೀಕರಣ ಅಗತ್ಯ. ರಾಷ್ಟ್ರದ ಎಲ್ಲ ಬಗೆಯ ಪ್ರಶ್ನೆ ಹಳ್ಳಿ ಯಲ್ಲಿ ಎದ್ದವು, ಎದ್ದೇ ಏಳುತ್ತವೆ. ಅಲ್ಲದೇ ಸಾಮೂಹಿಕ ಜೀವನದ ಕ್ಷೇತ್ರ ದಲ್ಲಿ ಹಳ್ಳಿಯೇ ಎಲ್ಲಕ್ಕಿಂತ ಕೆಳಗಿನದು. ವಿಕೇಂದ್ರೀಕರಣದ ಅಂತಿಮ ಎಲ್ಲೆ ಯೆಂದು ಹಳ್ಳಿಯನ್ನೇ ಹಿಡಿಯಬೇಕು.

೩) ಎಷ್ಟು ದೂರ ಸಾಧ್ಯವೋ ಅಷ್ಟು ದೂರದವರೆಗೂ ಆರ್ಥಿಕ ವ್ಯವ ಸ್ಥೆಯ ವಿಕೇಂದ್ರೀಕರಣ ಅಗತ್ಯ. ವಿಕೇಂದ್ರೀಕೃತವಾಗ ಬಲ್ಲ ಉದ್ಯೋಗ ಗಳೆಲ್ಲವನ್ನೂ ಸ್ವಾವಲಂಬನದ ದೃಷ್ಟಿಯಿಂದ ಗೃಹೋದ್ಯಮಗಳನ್ನಾಗಿಯೇ ನಡೆಸುವದು ಸಾಧ್ಯವಾಗಲಾರದು. ಅನೇಕ ಉದ್ಯೋಗಗಳನ್ನು ಗ್ರಾಮೋ ದ್ಯೋಗಗಳನ್ನಾಗಿ ನಡೆಸಬೇಕಾದೀತು. ಆದುದರಿಂದ ಆರ್ಥಿಕ ಕ್ಷೇತ್ರದಲ್ಲಿ ವಿಕೇಂದ್ರೀಕರಣಕ್ಕಾಗಿ ಹಳ್ಳಿಯನ್ನು ಅವಲಂಬಿಸಲಾಗಿದೆ.

೪) ಕೇಂದ್ರೀಕೃತ ವ್ಯವಸ್ಥೆಯಲ್ಲಿ ಯೋಜನೆ ವಿಫಲವಾಯಿತೆಂದರೆ ಇಡೀ ಸಮಾಜ ಹಾಗೂ ದೇಶಕ್ಕೆ ಹಾನಿ. ಯೋಜನೆಯ ಕ್ಷೇತ್ರವನ್ನು ಸಾಧ್ಯ ವಿದ್ದಷ್ಟು ಸಂಕುಚಿತಗೊಳಿಸಿದಲ್ಲಿ ಅದರ ವಿಫಲತೆಯ ಹಾನಿ ಸಮಾಜದ, ದೇಶದ ಇತರ ಭಾಗಗಳಿಗೆ ತಟ್ಟದು. ಈ ದೃಷ್ಟಿಯಿಂದ ಪ್ರತಿ ಹಳ್ಳಿಯೂ ತನ್ನ ಯೋಜನೆಯನ್ನು ತಾನೇ ತಯಾರಿಸಿದರೆ ಅದರ ವಿಫಲತೆಯ ಪರಿಣಾಮ ಗಳು ಆ ಹಳ್ಳಿಯ ಮಟ್ಟಿಗೆ ಮಾತ್ರ ಪರಿಮಿತವಾಗುವವು.

೫) ಪ್ರಾಚೀನ ಕಾಲದಲ್ಲಿ ಹಳ್ಳಿಯೇ ಆರ್ಥಿಕ ಶಾಸನ ವ್ಯವಸ್ಥೆಯ ಕೇಂದ್ರವಾಗಿತ್ತು. ಗ್ರಾಮಪಂಚಾಯತಿಗಳ ಮೂಲಕ ಶಾಸನದ ಆರ್ಥಿಕ ವ್ಯವಸ್ಥೆಯ ಸಂಚಾಲನೆ ನಡೆಯುತ್ತಿತ್ತು. ಲೋಕ ಮಾನಸದಲ್ಲಿ ಅದರ

ನೆನಪು ಇನ್ನೂ ಉಳಿದಿದೆ. ಎಂತಲೇ ಐತಿಹಾಸಿಕವಾಗಿಯೂ ಹಳ್ಳಿಯನ್ನೇ ಘಟಕವನ್ನಾಗಿ ಪರಿಗಣಿಸುವದು ಯೋಗ್ಯವಾಗಿದೆ.

ಈ ಕಾರಣಗಳಿಗಾಗಿ ಸರ್ವೋದಯ ಸಮಾಜ ರಚನೆಗೆಂದು ಹಳ್ಳಿಯನ್ನೇ ಪ್ರಯೋಗ ಶಾಲೆಯನ್ನಾಗಿ ಆಯ್ದುಕೊಳ್ಳಲಾಯಿತು.

ಆದರೆ ಈ ಪ್ರಯೋಗಶಾಲೆಯ ಪರಿಸ್ಥಿತಿ ಬಹಳ ಕೀಳುತರಗತಿಯದಾಗಿತ್ತು. ಬ್ರಿಟಿಶರಕಾಲದಲ್ಲಿ ಹಳ್ಳಿಯ ಸ್ವಾವಲಂಬನೆಯನ್ನು ಸ್ವಾಯತ್ತೆಯನ್ನು ನಾಶಗೊಳಿಸಲಾಗಿತ್ತು. ಹಳ್ಳಿಯು ಆರ್ಥಿಕ ಶೋಷಣೆಯ ಕೇಂದ್ರವಾಗಿತ್ತು. ಈ ರೀತಿ ಅಧಃಪತನ ಹೊಂದಿದ ಹಳ್ಳಿ ಪುನರುಜ್ಜೀವನ ಹೊಂದಬೇಕಾಗಿದೆ. ಹಳ್ಳಿಯು ಪುನರುಜ್ಜೀವನವನ್ನು ಹೊಂದದಿದ್ದರೆ ಭಾರತದ ಉದ್ಧಾರವಿಲ್ಲ. ಭಾರತದ ಉದ್ಧಾರವಿಲ್ಲದಿದ್ದರೆ ಜಗತ್ತಿನ ಉದ್ಧಾರವಿಲ್ಲ. ಯಾಕೆಂದರೆ ಜಗತ್ತಿನಲ್ಲಿ ಇಂದು ಉಂಟಾಗಿರುವ ಗಂಡಾಂತರ ಪರಿಸ್ಥಿತಿಗೆ ಯಾವದಾದರೂ ರಾಷ್ಟ್ರದಿಂದ ಪರಿಹಾರವು ದೊರೆಯುವದು ಸಾಧ್ಯವಿದ್ದರೆ ಅದು ಭಾರತದಿಂದ ಮಾತ್ರವೇ ದೊರೆಯಬಲ್ಲದೆಂಬದನ್ನು ಮರೆಯಲಾಗದು. ಅದಕ್ಕಾಗಿ ಹಳ್ಳಿಯ ಪುನರುದ್ಧಾರ ಇಂದು ಭಾರತಕ್ಕೂ ಜಗತ್ತಿಗೂ ಆವಶ್ಯಕವಾಗಿದೆ.

ಆದರೆ ಭಾರತದ ಹಳ್ಳಿಯ ಬಾಳೆಲ್ಲ ಭೂಮಿಯನ್ನು ಅವಲಂಬಿಸಿದೆ. ಭೂಮಿ ತಾಯಿಯೇ ಭಾರತದ ಹಳ್ಳಿಗರ ಆಶ್ರಯದಾತೆ. ಇಂದು ಹಳ್ಳಿಯಲ್ಲಿ ಉಳುವವನಿಗೆ ಭೂಮಿಯಿಲ್ಲ. ಆರ್ಥಿಕ ವಿಷಮತೆ ತುಂಬಿ ತುಳುಕುತ್ತಲಿದೆ.

ನೇಗಿಲವನ್ನು ಎಂದೂ ಕೈಯಲ್ಲಿ ಹಿಡಿಯದಿದ್ದ ಜಮೀನುದಾರನಿಗೆ ನೂರಾರು ಎಕರೆ ಭೂಮಿ ಒಂದೆಡೆಯಾದರೆ ಇನ್ನೊಂದೆಡೆ ಮಣ್ಣಿನ ಮಗನಾದ ರೈತನಿಗೆ ಭೂಮಿಯ ಒಡೆತನವೇ ಇಲ್ಲ. ಇಷ್ಟೇ ಅಲ್ಲ ಎಷ್ಟೋ ಕಡೆಗೆ ರೈತನಿಗೆ ತನ್ನ ಒಡೆತನವೂ ಇಲ್ಲ. ಅವನು ವಂಶಪರಂಪರೆಯಾಗಿ ನೆಲದೊಡೆಯನ ಸಿರಿವಂತನ ಗುಲಾಮನಾಗಿ ಬಾಳಬೇಕು. ಈ ಸ್ಥಿತಿ ಮಾಯವಾಗದೇ ಹಳ್ಳಿಯ ಉದ್ಧಾರವಿಲ್ಲ.

ಈ ವಿಷಮತೆಯನ್ನು ಸರಿಪಡಿಸಿ ಹಳ್ಳಿಯನ್ನು ಹೊಸ ರೀತಿಯಲ್ಲಿ ಕಟ್ಟುವದರ ಸಲುವಾಗಿಯೇ ಭೂದಾನ ಚಳುವಳಿ ಪ್ರಾರಂಭವಾಯಿತು.

ಭೂದಾನ ಚಳುವಳಿಯ ಉದ್ದೇಶವನ್ನು ಸ್ಪಷ್ಟಪಡಿಸುತ್ತ ಸಂತವಿನೋ-ಬಾಜಿಯವರು ಕೆಳಗಿನ ಏಳು ಉದ್ದೇಶಗಳು ಅದಕ್ಕಿದ್ದವು ಎಂದು ಹೇಳಿದ್ದಾರೆ.

೧) ಬಡತನದ ನಾಶ

೨) ಭೂಮಿಯ ಒಡೆಯರ ಹೃದಯದಲ್ಲಿ ಪ್ರೇಮ ಭಾವದ ವಿಕಾಸ ವನ್ನು ಉಂಟು ಮಾಡುವದು, ಹಾಗೂ ಅದರ ಫಲವಾಗಿ ದೇಶದ ನೈತಿಕ ವಾತಾವರಣವನ್ನು ಉನ್ನತಗೊಳಿಸುವದು.

೩) ಒಂದೆಡೆ ಭೂಮಿ ಒಡೆಯರ ವರ್ಗ ಮತ್ತೊಂದೆಡೆ ಭೂಮಿಹೀನ ರಾದ ಬಡವರ ವರ್ಗಕ್ಕೆ ಇವೆರಡೂ ವರ್ಗಗಳ ನಡುವೆ ಕಂಡು ಬರುವ ದ್ವೇಷ ವನ್ನು ಭೂದಾನ ಯಜ್ಞದ ಮೂಲಕ ದೂರ ಮಾಡುವದು. ಪರಸ್ಪರರಲ್ಲಿ ಪ್ರೇಮ ಹಾಗೂ ಸದ್ಭಾವನೆಯುಂಟುಮಾಡಿ ಸಮಾಜವನ್ನು ಶಕ್ತಿಶಾಲಿಯ ನ್ನಾಗಿ ಮಾಡುವದು.

೪) ಯಜ್ಞ, ದಾನ, ತಪಸ್ಸು ಈ ಮೂರು ಅಪೂರ್ವವಾದ ಅಂಶಗಳ ಮೇಲೆ ನಿಂತ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ.

೫) ದೇಶದಲ್ಲಿ ಶಾಂತಿ ಸ್ಥಾಪನೆ.

೬) ದೇಶದಲ್ಲಿ ಸ್ಥಾಪಿತವಾದ ಶಾಂತಿಯು ಮುಖಾಂತರ ವಿಶ್ವಶಾಂತಿಗೆ ನೆರವಾಗುವದು.

೭) ಭೂದಾನ ಯಜ್ಞದ ಮೂಲಕ ಭಿನ್ನ ಭಿನ್ನ ರಾಜಕೀಯ ಪಕ್ಷ ಗಳು ಪರಸ್ಪರ ಹತ್ತಿರ ಬರಲು ಒಂದು ಗೂಡಿ ಕೆಲಸಮಾಡಲು ಸದವಕಾಶ ವನ್ನು ಒದಗಿಸಿ ಕೊಡುವದು.

ಈ ಉದ್ದೇಶಗಳಲ್ಲಿ ಹಲವು ಉದ್ದೇಶಗಳು ಸಾಧ್ಯವಾಗಲು ಭೂದಾನ ಯಜ್ಞವು ನೆರವಾಗಿದೆ. ಭೂದಾನ ಯಜ್ಞದಿಂದ ಗ್ರಾಮದಾನದವರೆಗೆ ಉಂಟಾದ ಪ್ರಗತಿಯುನ್ನು ನಾವು ನಿರೀಕ್ಷಿಸಿದರೆ ಕೆಳಗಿನ ಈ ಕೆಲವು ಮಹತ್ವದ ಸಂಗತಿಗಳನ್ನು ಅದು ಸಾಧಿಸಿದೆ.

೧) ತೆಲಂಗಾಣದಲ್ಲಿ ತಲೆದೋರಿದ ಭೀಕರ ಅಶಾಂತತೆಯು ಭೂದಾನ ಯಜ್ಞದಿಂದ ಮಾಯವಾಗಿ ಅಲ್ಲಿ ಶಾಂತಿಯು ಪ್ರಸ್ಥಾಪಿತವಾಯಿತು. ವರ್ಗ ಕಲಹವನ್ನು ತಪ್ಪಿಸಿ ಶಾಂತಿ ಸ್ಥಾಪನೆ ಮಾಡಲು ಭೂದಾನವು ಪ್ರಭಾವಶಾಲಿ ಯಾದ ಸಾಧನವಾಗಿದೆ ಎಂಬ ಮಾತು ಸಿದ್ಧವಾಯಿತು. ಎಲ್ಲ ಪೋಲೀಸ

ಹಾಗೂ ಸೈನಿಕ ಬಲವು ವಿಫಲವಾಗಿತ್ತೋ ಅಲ್ಲಿ ಭೂದಾನ ಯಜ್ಞವು ಸಫಲ ವಾಯಿತು. ಆದುದರಿಂದ ಇದೊಂದು ಹೊಸ ಮಾರ್ಗವೆಂಬುದನ್ನು ಎಲ್ಲರೂ ಒಪ್ಪುವಂತಾಯಿತು.

೨) ತೆಲಂಗಾಣದಲ್ಲಿ ಭೀಕರ ವಾತಾವರಣವಿತ್ತು. ಅದರಿಂದ ಹೇಗಾದರೂ ಪಾರಾಗಲು ಭೂದಾನ ಯಜ್ಞಕ್ಕೆ ಜನ ಮೊರೆ ಹೊಕ್ಕರು. ಆದುದರಿಂದ ಅದು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಮಾತ್ರ ಸಾಧ್ಯವೆಂದು ಕೆಲವರಿಗೆ ಎನಿಸಬಹುದು. ಹೀಗೆ ವಿನೋಬಾ ಅವರಿಗೂ ಎನಿಸಿತ್ತು. ಆದರೆ ಅವರು ವರ್ಧಾದಿಂದ ದಿಲ್ಲಿಗೆ ಹೊರಟಾಗ ದಾರಿಯಲ್ಲಿ ಭೂದಾನ ಯಜ್ಞದ ಪ್ರಯೋಗವನ್ನು ಮಾಡಿದರು. ಈ ಪ್ರಯೋಗದ ಕ್ಷೇತ್ರದಲ್ಲಿ ಶಾಂತ ವಾತಾವರಣವಿತ್ತು. ಸಾಮಾನ್ಯ ಪರಿಸ್ಥಿತಿಯಿತ್ತು. ಅಲ್ಲಿ ಕೂಡ ಅದು ಯಶಸ್ವಿಯಾಯಿತು. ಇದರಿಂದ ಭೂದಾನ ಯಜ್ಞವು ಅಶಾಂತ ಹಾಗೂ ಶಾಂತ ಎರಡೂ ವಾತಾವರಣಗಳಲ್ಲಿ ಉಪಯೋಗಬೀಳುವ ಅಸ್ತ್ರವೆಂದು ಸಿದ್ಧವಾಯಿತು.

೩) ಭೂದಾನದಲ್ಲಿ ಲಕ್ಷಗಟ್ಟಲೆ ಜನರು ದಾನ ಮಾಡಿದರು. ಕೋಟಿಗಟ್ಟಲೆ ಎಕರೆ ಭೂಮಿ ದಾನವಾಗಿ ಬಂದಿತು. ಇದರಿಂದ ಹೃದಯ ಪರಿವರ್ತನೆಯ ಮಾರ್ಗದಿಂದ ಭೂಮಿಯ ಸಮಸ್ಯೆಯನ್ನು ಇದ್ದವರ ಹಾಗೂ ಇಲ್ಲದವರ ಸಮಸ್ಯೆಯನ್ನು ಬಿಡಿಸುವದು ಸಾಧ್ಯವಿದೆ ಎಂಬ ಮಾತು ಸ್ಪಷ್ಟವಾಯಿತು.

೪) ವರ್ಗ ಕಲಹಕ್ಕೆ ಮೂಲವಾದ ವ್ಯಕ್ತಿಗತ ಒಡೆತನವನ್ನು ಭೂ–ದಾನ ಯಜ್ಞವು ಇಲ್ಲದಂತೆ ಮಾಡಬಹುದೇ? ಎಂಬ ಪ್ರಶ್ನೆಗೆ ಗ್ರಾಮದಾನದಿಂದ ಉತ್ತರ ದೊರೆಯಿತು. ಅಂದರೆ ಹೃದಯ ಪರಿವರ್ತನೆಯ ದಾರಿಯಿಂದ ವರ್ಗ ಕಲಹದ ಮೂಲವಾದ ವ್ಯಕ್ತಿಗತ ಒಡೆತನವನ್ನೇ ತೆಗೆದುಹಾಕಬಹುದು ಎಂಬ ಮಾತು ಗ್ರಾಮದಾನದಿಂದ ಸಿದ್ಧವಾಯಿತು.

ಒಟ್ಟಿನಲ್ಲಿ ಭೂದಾನ ಯಜ್ಞವು ಬಡತನದ ಸಮಸ್ಯೆಯನ್ನು ಬಿಡಿಸಲು ಶಾಂತಿ ಸ್ಥಾಪನೆ ಮಾಡಲು, ವರ್ಗ ಕಲಹವನ್ನು ಇಲ್ಲದಾಗಿಸಲು, ದೇಶದಲ್ಲಿ ಒಕ್ಕಟ್ಟನ್ನು ಬೆಳೆಯಿಸಲು, ಮಾನವತೆಯನ್ನು ಉಳಿಸಲು ಬಹಳಷ್ಟು ನೆರವಾಗಿ ಈಗ ಗ್ರಾಮದಾನದವರೆಗೆ ಬಂದು ನಿಂತಿದೆ.

ಆದರೆ ಗ್ರಾಮದಾನವೇ ಕೊನೆಯ ಮೆಟ್ಟಲಲ್ಲ. ಬರೀ ಗ್ರಾಮದಾನ ದಿಂದಲೇ ಸಮಸ್ಯೆ ಬಿಡುವದಿಲ್ಲ. ಗ್ರಾಮದಾನದ ಸರಿಯಾದ ಅರ್ಥವನ್ನು ತಿಳಿದುಕೊಂಡು ಮುನ್ನಡೆದಾಗ ಮಾತ್ರ ಸರ್ವೋದಯ ಸಮಾಜವು ಅಸ್ತಿತ್ವ ದಲ್ಲಿ ಬರಲು ಸಾಧ್ಯವಾಗಬಹುದು.

ಹಾಗಾದರೆ ಗ್ರಾಮದಾನದ ನಿಜವಾದಅರ್ಥವೇನು ಗ್ರಾಮದಾನಯಜ್ಞವು ಏತಕ್ಕಾಗಿ ನಡೆದಿದೆ? ಈ ವಿಷಯದ ಬಗ್ಗೆ ವಿನೋಬಾ ಅವರು ಬೆಂಗಳೂರಿ ನಲ್ಲಿ ಭಾಷಣ ಮಾಡುತ್ತ ಹೀಗೆ ಹೇಳಿದ್ದಾರೆ.

ಎರಡನೆಯ ಸೂಚನೆ ಗ್ರಾಮದಾನದ ವಿಚಾರ ಏನು ಎಂಬುದನ್ನು ಪೂರ್ಣವಾಗಿ ಅರಿತುಕೊಳ್ಳಿರಿ. ಇಲ್ಲಿಯವರೆಗೆ ಇದ್ದವರಿಂದ ತೆಗೆದುಕೊಂಡು ಇಲ್ಲದವರಿಗೆ ಕೊಡಬೇಕು; ಇದ್ದವನಿಗೆ ಕೊಡುವದು ಧರ್ಮ, ಇಲ್ಲದವನಿಗೆ ತೆಗೆದುಕೊಳ್ಳುವದು ಧರ್ಮ ಎಂದು ಜನ ತಿಳಿದಿದ್ದರು. ಧರ್ಮ ಹೀಗೆ ಇರದು—ಎಲ್ಲರಿಗೂ ಒಂದೇ ಧರ್ಮ. ಸತ್ಯವಾಡುವುದು ಧರ್ಮ ಎಂದರೆ ಯಾರಿಗೆ? ಎಲ್ಲರಿಗೂ. ಪ್ರೇಮಿಸಬೇಕು ಎಂಬ ಧರ್ಮ ಎಲ್ಲರಿಗೂ. ಅದೇ ರೀತಿ ಕೊಡುವದು ಒಂದು ಧರ್ಮ ಎಂದರೆ, ಕೊಡುವದು ಎಲ್ಲರಿಗೂ ಧರ್ಮ. ಆದುದರಿಂದ ಈ ದೇಶದಲ್ಲಿ ಜಗತ್ತಿನಲ್ಲಿಯೇ ಸಂಪತ್ತಿಹೀನ ಯಾರೂ ಇಲ್ಲ ವೆಂಬುದನ್ನು ಅರಿತುಕೊಳ್ಳಬೇಕು. ಪ್ರತಿಯೊಬ್ಬನ ಬಳಿಯಲ್ಲಿಯೂ ಕೊಡಲು ಯೋಗ್ಯವಾದುದು ಏನಾದರೂ ಇದ್ದೇ ಇರುತ್ತದೆ. ಕೆಲವರ ಬಳಿ ಹೊಲವಿದೆ. ಕೆಲವರ ಬಳಿ ಐಶ್ವರ್ಯವಿದೆ. ಕೆಲವರ ಬಳಿ ಬುದ್ಧಿ ಇದೆ. ಕೆಲವರಲ್ಲಿ ಶ್ರಮ ಶಕ್ತಿಯಿದೆ. ಪ್ರೇಮವಂತೂ ಎಲ್ಲರಲ್ಲೂ ಇದೆ ಅಥವಾ ಇರಬೇಕಾದುದೇ ಕೊಡಲು ಯಾರ ಬಳಿಗೆ ಏನಿದೆಯೋ ಅದನ್ನು ಅವರು ಗ್ರಾಮದಾನದಲ್ಲಿ ಕೊಡಲಿ. ಹಳ್ಳಿಯಲ್ಲಿ ಹೊಲವಿದ್ದವರೆಲ್ಲ ತಮ್ಮ ಹೊಲವನ್ನಷ್ಟು ಕೊಟ್ಟು ಬಿಟ್ಟರೆ ಗ್ರಾಮದಾನವಾಯಿತು ಎಂಬುದು ಅಪೂರ್ಣವಾದ ವಿಚಾರ. ಹೊಲ ವಂದಿಗರು ಇಲ್ಲಿಯವರೆಗೆ ತಮ್ಮ ಹೊಲವನ್ನು ತಮ್ಮ ಕುಟುಂಬಕ್ಕಾಗಿಯೇ ಉಪಯೋಗಿಸುತ್ತಿದ್ದರು. ಈಗ ಅದನ್ನು ಇಡೀ ಹಳ್ಳಿಗಾಗಿ ಉಪಯೋಗಿ ಸಲು ನಿಶ್ಚಯಿಸಿದ್ದಾರೆ. ಬಹಳ ಒಳ್ಳೆಯಮಾತು. ಇದೇ ರೀತಿ, ಇದುವರೆಗೆ ತಮ್ಮ ಮನೆಯವರಿಗಾಗಿಯೇ ದುಡಿಯುತ್ತಿದ್ದ ಕೆಲಸಗಾರ ತನ್ನ ಕೂಲಿಗಾ ರಿಕೆಯನ್ನು ಇಡೀ ಹಳ್ಳಿಗೆ ಸಮರ್ಪಿಸಬೇಕು. ಗ್ರಾಮದಾನದಲ್ಲಿ ಕೇವಲ

ಹೊಲವೊಂದಿಗರ ಹೃದಯ ಪರಿವರ್ತನೆಯನ್ನು ಮಾಡಬೇಕಾಗಿಲ್ಲ. ಇಡೀ ಜನತೆಯ ಹೃದಯ ಪರಿವರ್ತನೆಯನ್ನು ಮಾಡಬೇಕು. ಕೆಲವರಿಂದ ತೆಗೆದು ಕೊಳ್ಳುವದು, ಕೆಲವರಿಗೆ ಕೊಡುವದು ಅಲ್ಲ ಈ ವಿಚಾರ. ಮೊಟ್ಟಮೊದಲು ತೆಲಂಗಾಣದಲ್ಲಿ ಭೂದಾನ ಯಜ್ಞವು ಪ್ರಾರಂಭವಾದಾಗ ಹಾಗಿತ್ತು ವಿಚಾರ. ನಾನೂ ಆ ರೀತಿ ಹೇಳುತ್ತಿದ್ದೆ. ಆದರೆ ಆಕಾಶದಲ್ಲಿ ಸಂಚಾರ ಮಾಡುತ್ತ ವಿಚಾರದ ವಿಕಾಸವಾಗಿದೆ. ಈಗ ಒಂದು ಪೂರ್ಣ ವಿಚಾರವಾಗಿದೆ: ಗ್ರಾಮ ದಲ್ಲಿ ಯಾರ ಬಳಿ ಏನಿದೆಯೋ ಅದು ಗ್ರಾಮ ಸಮಾಜಕ್ಕೆ ಅರ್ಪಿತವಾಗ ಬೇಕು. ಈ ಪೂರ್ಣ ವಿಚಾರವನ್ನು ಅರಿತು ಜನತೆಗೆ ತಿಳಿಸಬೇಕು.

ಸಂತ ವಿನೋಬಾ ಅವರು ಗ್ರಾಮದಾನದ ಬಗ್ಗೆ ಕೊಟ್ಟಿರುವ ಈ ವಿವರ ಣೆಯನ್ನು ನೋಡಿದಾಗ ಗ್ರಾಮದಾನವು ಭೂದಾನದಕ್ಕಿಂತ ಮುಂದೆ ಇಟ್ಟ ಹೆಜ್ಜೆಯೆಂದೂ ಗ್ರಾಮದಾನವು ಗ್ರಾಮ ಸಮಾಜಕ್ಕೆ ತಳಹದಿಯೆಂದೂ ಗೊತ್ತಾಗುವದು.

ಒಮ್ಮೆ ಗ್ರಾಮ ಸಮಾಜವು ನಿರ್ಮಾಣವಾದನಂತರ ಸರ್ವೋದಯ ಸಮಾಜವು ನಿರ್ಮಾಣವಾಗಲು ಬಹಳ ದಿನ ಹಿಡಿಯುವದೇ ಇಲ್ಲ. ಗ್ರಾಮ ಸಮಾಜದ ಮುಂದಿನ ಹೆಜ್ಜೆಯೇ ಸರ್ವೋದಯ ಸಮಾಜ.

ಒಟ್ಟಿನಲ್ಲಿ ಭೂದಾನ ಗ್ರಾಮದಾನಗಳ ಹುಟ್ಟು ಹಾಗೂ ಬೆಳವಣಿಗೆ ಗಳನ್ನು ಪರಿಶೀಲಿಸಿದಾಗ ಅವು ಸರ್ವೋದಯ ಸಮಾಜಕ್ಕೆ ಭದ್ರವಾದ ತಳ ಪಾಯವನ್ನು ಹಾಕುತ್ತವೆಂಬುದು ಮನದಟ್ಟಾಗುವದು. ಆದುದರಿಂದ ಭೂದಾನ ಗ್ರಾಮದಾನಗಳಿಲ್ಲದೇ ಸರ್ವೋದಯ ಸಮಾಜವೇ ಅಸ್ತಿತ್ವದಲ್ಲಿ ಬರಲಾರದೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಿಕ್ಕಿಲ್ಲ.



# ಸರ್ವೋದಯ ಸಮಾಜವೇ ಏಕೆ?

ಇಲ್ಲಿಯ ವರೆಗೆ ನಾವು ಸರ್ವೋದಯ ಸಮಾಜವೆಂದರೇನು ? ಅದು ಹೇಗೆ ರೂಪಗೊಳ್ಳುತ್ತಲಿವೆ ? ಅದರ ನಿರ್ಮಾಣದಲ್ಲಿ ಭೂದಾನ ಗ್ರಾಮದಾನ ಗಳ ಮಹತ್ವವೇನಿದೆ ? ಇವನ್ನೆಲ್ಲ ವಿಚಾರಿಸಿದೆವು.

ಈಗ ವಿಚಾರ ಮಾಡಿದ್ದನ್ನೆಲ್ಲ ಒಂದು ಕ್ಷಣ ಒಬ್ಬ ವಿಚಾರವಂತನು ಒಪ್ಪಿಕೊಂಡರೂ " ಸರ್ವೋದಯ ಸಮಾಜವೇ ನಮಗೆ ಏಕೆ ಬೇಕು ? ಅದರ ಬದಲಾಗಿ ಬೇರೊಂದು ವ್ಯವಸ್ಥೆಯು ಇದಕ್ಕಿಂತಲೂ ಉತ್ತಮವಾದ ವ್ಯವ ಸ್ಥೆಯು ಇಲ್ಲವೇ ?" ಎಂಬ ಪ್ರಶ್ನೆ ಅವನನ್ನು ಕೆಣಕದೇ ಇರಲಾರದು. ಆದುದ ರಿಂದ ಈ ಪ್ರಶ್ನೆಯನ್ನು ಕೂಲಂಕಷವಾಗಿ ವಿಚಾರಿಸುವದು ಅಗತ್ಯವಾಗಿದೆ. ನಮಗೆ ಸರ್ವೋದಯವೇ ತಾರಕಮಂತ್ರವೆಂದು ನಮ್ಮ ಮನಸ್ಸಿಗೆ ಬುದ್ಧಿಗೆ ಒಮ್ಮೆ ನಿಶ್ಚಿತವಾಗಿ ಹೊಳೆಯಿತೆಂದರೆ ಅದರಲ್ಲಿ ನಮ್ಮ ಶ್ರದ್ಧೆಯು ಬೆಳೆದು ಬರುತ್ತದೆ. ಶ್ರದ್ಧೆ ಬೆಳೆಯಿತೆಂದರೆ ಕಾರ್ಯ ಪ್ರಾರಂಭವಾಗುತ್ತದೆ. ಶ್ರದ್ಧೆ ಯಿಲ್ಲದೇ ಮಾಡಿದ ಯಾವ ಕಾರ್ಯವೂ ಯಶಸ್ವಿಯಾಗುವದಿಲ್ಲ. ಶ್ರದ್ಧೆ ಹುಟ್ಟ ಬೇಕಾದರೆ ನಮ್ಮ ಬುದ್ಧಿ ಒಪ್ಪಬೇಕು. ಅದಕ್ಕಾಗಿ ಸರ್ವೋದಯವು ಇಂದು ಅಪರಿಹಾರ್ಯವೇ ? ಎಂಬ ಪ್ರಶ್ನೆಯನ್ನು ಈಗ ಚರ್ಚಿಸುವದು ಅಗತ್ಯವಾಗಿದೆ.

ಮನುಷ್ಯನು ಅತಿ ಪ್ರಾಚೀನ ಕಾಲದಿಂದಲೂ ಸತ್ಯ, ಅಹಿಂಸೆ, ಸಮತೆ, ಜ್ಞಾನ, ಸ್ವಾತಂತ್ರ್ಯ, ಮಾನವತೆ, ವಿಶ್ವಬಂಧುತ್ವ ಇವೇ ಮೊದಲಾದ ಆದರ್ಶಗಳನ್ನು ಕಣ್ಣಮುಂದೆ ಇಟ್ಟುಕೊಂಡು ಅವುಗಳನ್ನು ಜೀವನದಲ್ಲಿ ಕಾರ್ಯ ರೂಪಕ್ಕೆ ತರಲು ಅಖಂಡವಾಗಿ ಪರಿಶ್ರಮ ಮಾಡುತ್ತ ಬಂದಿದ್ದಾನೆ. ಒಂದು ಕಡೆ ಧರ್ಮ ಹಾಗೂ ತತ್ತ್ವಜ್ಞಾನಗಳು ಈ ಗುರಿಯನ್ನು ಮುಂದಿಟ್ಟು ಕೊಂಡು ಕೆಲಸಮಾಡುತ್ತಿದ್ದರೆ ಇನ್ನೊಂದು ಕಡೆಗೆ ಕಲೆ, ಸಾಹಿತ್ಯ, ವಿಜ್ಞಾನ ಗಳು ಈ ಆದರ್ಶಗಳನ್ನು ಮುಟ್ಟಲು ಅವನಿಗೆ ನೆರವಾಗುತ್ತಲಿವೆ. ಆದರೂ ಅವನು ಈ ಆದರ್ಶಗಳಿಂದ ಇನ್ನೂ ಬಹಳ ದೂರವಾಗಿದ್ದಾನೆ. ಇದಕ್ಕೆ ಕಾರಣವೇನು ?

ಇದಕ್ಕೆ ಅವನು ಇರುವ ಸಮಾಜ ವ್ಯವಸ್ಥೆಯೇ ಕಾರಣವೆಂದು ಹೇಳಬಹುದು. ಸಮಾಜದಲ್ಲಿ ಮೊದಲು ಶ್ರಮವಿಭಾಗಕ್ಕೆಂದು ವರ್ಣಾಶ್ರಮಗಳು ಬಂದವು. ನಂತರ ಅವು ವಿವಿಧ ಜಾತಿ ಹಾಗೂ ಮತ ಪಂಥಗಳ ರೂಪದಲ್ಲಿ ಸಮಾಜದಲ್ಲಿ ಮೇಲು ಕೀಳು ಎಂಬ ಭಾವನೆಯನ್ನು ತಂದವು.

ಇದರ ಪರಿಣಾಮವಾಗಿ ಸಮಾಜದ ಆರ್ಥಿಕ ವ್ಯವಸ್ಥೆಯಲ್ಲಿಯೂ ಮಾರ್ಪಾಟು ಆಯಿತು. ಇದ್ದವರು ಇಲ್ಲದವರು ದುಡಿಸಿಕೊಳ್ಳುವವರು ದುಡಿಯುವವರು ಎಂಬ ವರ್ಗಗಳು ಉಂಟಾದವು. ಈ ವರ್ಗ ಕಲಹದ ಮೇಲೆಯೇ ರಾಜ್ಯ ಸಾಮ್ರಾಜ್ಯಗಳು ಬಾಳಿ ಬದುಕಿದವು. ಆಧುನಿಕ ಕಾಲದಲ್ಲಿ ಯುರೋಪ ಖಂಡದಲ್ಲಿ ತಲೆದೋರಿದ ಔದ್ಯೋಗಿಕ ಕ್ರಾಂತಿಯು ಈ ವರ್ಗ ಕಲಹವನ್ನು ತೀಕ್ಷ್ಣ ಗೊಳಿಸಿತು. ಯಾಕಂದರೆ ಆಧುನಿಕ ವಿಜ್ಞಾನವು ಉತ್ಪಾದನೆಯನ್ನು ಕೆಲವೇ ಜನರು ತಮ್ಮ ಕೈಯಲ್ಲಿ ಕೇಂದ್ರೀಕರಿಸಿಟ್ಟುಕೊಳ್ಳಲು ಅನುಕೂಲತೆಗಳನ್ನು ಒದಗಿಸಿಕೊಟ್ಟಿತು.

ಉತ್ಪಾದನೆಯ ಕೇಂದ್ರೀಕರಣದಿಂದ ಹೊಸ ಸಮಸ್ಯೆಗಳು ತಲೆದೋರಿದವು. ಶೋಷಣೆಯು ಬಹಳ ದೊಡ್ಡ ಪ್ರಮಾಣದಿಂದ ಬಹಳ ಸೂಕ್ಷ್ಮವಾದ ರೀತಿಯಲ್ಲಿ ಸಮಾಜದಲ್ಲಿ ಹರಡಿತು. ಉತ್ಪಾದನೆಯ ಕೇಂದ್ರೀಕರಣ ಹಾಗೂ ವಿತರಣ ವ್ಯವಸ್ಥೆಗಾಗಿ ರಾಷ್ಟ್ರ ರಾಷ್ಟ್ರಗಳಲ್ಲಿ ಸ್ಪರ್ಧೆ ನಡೆದು ಈ ಶತಮಾನದ ಮೊದಲಿನ ಅರ್ಧಭಾಗದಲ್ಲಿ ಎರಡು ಜಾಗತಿಕ ಯುದ್ಧಗಳು ತಲೆದೋರಿದವು. ಇಂದು ಇನ್ನೊಂದು ಜಾಗತಿಕ ಯುದ್ಧದ ಸಿದ್ಧತೆಗಳು ನಡೆದಿವೆ. ಇನ್ನೊಂದು ಜಾಗತಿಕ ಯುದ್ಧವಾದರೆ ಅದರಲ್ಲಿ ಅಣ್ವಸ್ತ್ರಗಳು ಬಳಸಲ್ಪಡುವದರಿಂದ ಮಾನವ ಕುಲವೇ ಇಂದು ನಾಶವಾಗುವ ಸ್ಥಿತಿಯೊದಗಿದೆ.

ಈ ವಿಷಮ ಪರಿಸ್ಥಿತಿಯಿಂದ ಮಾನವ ಜನಾಂಗವನ್ನು ಸುರಕ್ಷಿತವಾಗಿ ಪಾರು ಮಾಡಲು ಇಂದು ಮುಖ್ಯವಾಗಿ ೧) ಪ್ರಜಾಪ್ರಭುತ್ವ (Democracy) ೨) ಸಮಾಜವಾದ (Socialism) ೩) ಸಮತಾವಾದ (Communism) ಮತ್ತು ೪) ಸರ್ವೋದಯಗಳು ಪ್ರಯತ್ನಿಸುತ್ತಲಿವೆ.

ಇವುಗಳಲ್ಲಿ ಮನು ಕುಲಕ್ಕೆ ಯಾವದು ನಿಜವಾದ ತಾರಕ ಮಂತ್ರವೆಂಬದನ್ನು ನಾವು ತಿಳಿದುಕೊಳ್ಳಬೇಕಾಗಿದೆ.

೧) **ಪ್ರಜಾಪ್ರಭುತ್ವ:** – ಪ್ರಜಾಪ್ರಭುತ್ವವು ವ್ಯಕ್ತಿ ಸ್ವಾತಂತ್ರ್ಯವನ್ನು ಮನ್ನಿಸುತ್ತದೆ. ಅಲ್ಲಿ ರಾಜಕೀಯ ಸಮತೆ ಸ್ವಾತಂತ್ರ್ಯಗಳು ದೊರೆಯುತ್ತವೆ.

ಒಬ್ಬ ವ್ಯಕ್ತಿಯು ತನಗೆ ಬೇಕಾದ ಉದ್ಯೋಗವನ್ನು ಮಾಡಲು ತನಗೆ ಬೇಕಾದ ಆಸ್ತಿಯನ್ನು ಗಳಿಸಲು ಸ್ವಾತಂತ್ರ್ಯವಿದೆ. ವೈಯಕ್ತಿಕ ಸ್ಪರ್ಧೆಗೆ ಪ್ರಜಾಪ್ರಭುತ್ವದಲ್ಲಿ ಸಂಪೂರ್ಣವಾದ ಸ್ವಾತಂತ್ರ್ಯವಿರುವದರಿಂದ ಆರ್ಥಿಕ ಶೋಷಣೆ ಅನಿರ್ಬಂಧವಾಗಿ ನಡೆಯಲು ಅಲ್ಲಿ ಸಾಕಷ್ಟು ಅವಕಾಶ ದೊರೆಯುತ್ತದೆ. ಇದರಿಂದ ಸಮಾಜದಲ್ಲಿ ಆರ್ಥಿಕ ಸಮಾನತೆ ಇಲ್ಲದಂತಾಗಿ ವರ್ಗ ಕಲಹವು ಅವ್ಯಾಹತವಾಗಿ ಸಾಗುತ್ತದೆ. ಆದುದರಿಂದ ರಾಜಕೀಯವಾಗಿ ಪ್ರಜಾಪ್ರಭುತ್ವವು ಇಷ್ಟವೆನಿಸಿದರೂ ಶೋಷಣ ರಹಿತ ಸಮಾಜವನ್ನು ನಿರ್ಮಿಸುವದರಲ್ಲಿ ಅದು ಅಯಶಸ್ವಿಯಾಗಿದೆ. ಆದುದರಿಂದ ಪ್ರಜಾಪ್ರಭುತ್ವವೇ ಮಾನವ ಕುಲಕ್ಕೆ ತಾರಕಮಂತ್ರವಾಗಲಾರದು.

೨) **ಸಮತಾವಾದ** (Communism) : – ಸಮತಾವಾದವು ವರ್ಗ ರಹಿತವಾದ ಶೋಷಣ ರಹಿತವಾದ ಸಮಾಜವನ್ನು ನಿರ್ಮಿಸುವ ಗುರಿಯನ್ನು ಇಟ್ಟುಕೊಂಡು ಹೊರಟಿದೆ. ಆದರೆ ಈ ಗುರಿಯನ್ನು ಸಾಧಿಸುವದಕ್ಕಾಗಿ ಅದು ಅನುಸರಿಸುವ ಮಾರ್ಗಗಳು ಅತ್ಯಂತ ಅಮಾನುಷ ಹಾಗೂ ಕ್ರೂರವಾಗಿರುವದರಿಂದ ಅದು ಮನುಷ್ಯನಿಗೆ ಕಲ್ಯಾಣಕಾರಿಯಾಗಲಾರದು. ಒಳ್ಳೆಯ ಗುರಿಯನ್ನು ಸಾಧಿಸುವದಕ್ಕಾಗಿ ಎಂಥ ಹೀನ ಕಾರ್ಯವನ್ನಾದರೂ ಮಾಡಬಹುದು ಎಂಬ ಸಮತಾವಾದದ ಸಿದ್ಧಾಂತವು ಮಾನವ ಕುಲವನ್ನೇ ಅಧೋಗತಿಗೊಯ್ಯುತ್ತದೆ. ಸಮತಾವಾದವನ್ನು ಸ್ಥಾಪಿಸಲು ರಶಿಯುವು ಗೈದ ಕಗ್ಗೊಲೆ ಹಾಗೂ ಅತ್ಯಾಚಾರಗಳನ್ನು ನೆನೆದರೆ ಮೈಯಲ್ಲಿಯ ರಕ್ತವು ಹೆಪ್ಪುಗಟ್ಟುತ್ತದೆ.

ಎರಡನೆಯದಾಗಿ ಇಂಥ ರಕ್ತರಂಜಿತವಾದ ದಾರಿಯಿಂದ ಸಮತಾವಾದವನ್ನು ಪಡೆದರೂ ಅಲ್ಲಿ ಸಮಾನತೆ ದೊರೆಯುವದೇ ಇಲ್ಲ. ಯಾಕಂದರೆ ಸಮತಾವಾದದಲ್ಲಿ ಆರ್ಥಿಕ ಸಮತೆ ದೊರೆತರೂ ರಾಜಕೀಯ ಸಮಾನತೆ ದೊರೆಯುವದಿಲ್ಲ. ರಾಜಕೀಯ ಸಮಾನತೆ ಇಲ್ಲದೆ ಹೋಗುವದರಿಂದ ವ್ಯಕ್ತಿ ಸ್ವಾತಂತ್ರ್ಯವೂ ನಷ್ಟವಾಗುತ್ತದೆ. ಮನುಷ್ಯನ ಮನುಷ್ಯತ್ವವು ವ್ಯಕ್ತಿ

ಸ್ವಾತಂತ್ರ್ಯದಿಂದಲೇ ಬಂದಿರುತ್ತದೆ. ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದು ಕೊಂಡರೆ ಮನುಷ್ಯನು ಪಶುವಾಗುತ್ತಾನೆ.

ಮೂರನೆಯದಾಗಿ ಸಮತಾವಾದದಲ್ಲಿ ನೀತಿ, ಧರ್ಮ, ಆತ್ಮ ದೇವರು ಮೊದಲಾದ ಮಾನವೀಯ ಉಚ್ಚ ಆದರ್ಶಗಳಿಗೆ ಸ್ಥಾನವೇ ಇಲ್ಲ. ಆದುದ ರಿಂದ ಸಮತಾವಾದದ ಸಮಾಜದಲ್ಲಿ ಮನುಷ್ಯನು ಬರಿ ದುಡಿಯುವ ಹಾಗೂ ಉಣ್ಣುವ ಯಂತ್ರವಾಗಿ ಬಿಡುತ್ತಾನೆ.

ನಾಲ್ಕನೆಯದಾಗಿ ಆರ್ಥಿಕ ಹಾಗೂ ರಾಜಕೀಯ ಶಕ್ತಿಗಳ ಕೇಂದ್ರೀ ಕರಣವು ಬಹಳ ದೊಡ್ಡ ಪ್ರಮಾದಲ್ಲಿ ನಡೆಯುವದರಿಂದ ಸಮತಾವಾದದಲ್ಲಿ ವ್ಯಕ್ತಿತ್ವದ ಸಮಾಧಿಯೇ ಆಗುತ್ತದೆ. ಅಲ್ಲಿ ವ್ಯಕ್ತಿ (Individual) ಎನ್ನು ವದು ಅಸ್ತಿತ್ವದಲ್ಲಿರುವಂತೇ ಇಲ್ಲ. ಅಲ್ಲಿ ಇರುವದೆಲ್ಲ ಬರೀ ಸಮೂಹ (Commune) ಒಂದೇ. ಅಲ್ಲಿ ವೈಯಕ್ತಿಕ ಜೀವನವೂ ಸಾಧ್ಯವಿಲ್ಲ. ವ್ಯಕ್ತಿಯ ಜೀವಕ್ಕೂ ಮಹತ್ವವಿಲ್ಲ. ನಾವು ತಗಣಿಗಳನ್ನು ಒರೆಯುವಂತೆ ಅಲ್ಲಿ ವ್ಯಕ್ತಿಗಳನ್ನು ಅಳಿಸಿಬಿಡಲಾಗುತ್ತದೆ. ಅಲ್ಲಿ ವ್ಯಕ್ತಿಗಳಿಗಾಗಿ ಸಮಾಜವಲ್ಲ. ಸಮಾಜಕ್ಕಾಗಿ ವ್ಯಕ್ತಿಗಳು. ಹೀಗಾಗಿ ಸಮತಾವಾದದಲ್ಲಿ ಆರ್ಥಿಕ ಸಮಾನತೆ ಬಂದರೂ ಅದನ್ನು ಅನುಭವಿಸಲು ವ್ಯಕ್ತಿಗಳೇ ಇರುವದಿಲ್ಲ.

ಕೊನೆಯದಾಗಿ ಇಷ್ಟೆಲ್ಲ ಅನರ್ಥ ಪರಂಪರೆಗಳನ್ನು ಅನುಭವಿಸಲು ನಾವು ಸಿದ್ಧವಾದರೂ ನಿಜವಾದ ಸಮತಾವಾದವನ್ನು ಅಸ್ತಿತ್ವದಲ್ಲಿ ತರಲಾಗು ವದಿಲ್ಲ. ಈಗ ಸಮತಾವಾದವೆಂದು ರಶಿಯಾ ಹಾಗೂ ಚೀನಾ ದೇಶಗಳಲ್ಲಿ ಅಸ್ತಿತ್ವದಲ್ಲಿರುವದು ಸರಕಾರೀ ಬಂಡವಲ ಶಾಹಿ (State Capitalism) ಶ್ರಮಜೀವಿಗಳ ಸರ್ವಾಧಿಕಾರಿತ್ವ (Dictatorship of the Proletariat). ರಶಿಯದ ಸಮತಾವಾದದ ಬಗ್ಗೆ ಶ್ರೀ ಜಯಪ್ರಕಾಶ ನಾರಾಯಣರು ಹೇಳಿದ ಮಾತುಗಳನ್ನು ಅಲ್ಲಿ ನಿಜವಾಗಿಯೂ ಏನಿದೆ ಎಂಬುದನ್ನು ನಮ್ಮ ಅರಿವಿಗೆ ತಂದು ಕೊಡುತ್ತವೆ. ಶ್ರೀ ಜಯಪ್ರಕಾಶನಾರಾಯರು ತಮ್ಮ ಸುಪ್ರಸಿದ್ಧ ಪತ್ರದಲ್ಲಿ ಹೀಗೆ ನುಡಿದಿದ್ದಾರೆ.

" In Soviet Russia we see not only denial of "formal" freedom but also denial of social justice, of equality; we saw

the growth of a new class of bureaucratic rulers, of new forms of exploitation ".

[ ಸೋವಿಯತ್ ರಶಿಯದಲ್ಲಿ ಔಪಚಾರಿಕವಾದ ಸ್ವಾತಂತ್ರ್ಯವಿಲ್ಲ. ಎಂಬ ದಿಷ್ಟೇ ಅಲ್ಲ. ಅಲ್ಲಿ ಸಾಮಾಜಿಕ ನ್ಯಾಯ ಹಾಗೂ ಸಮಾನತೆಗಳೂ ಇಲ್ಲ. ಅಲ್ಲಿ ಹೊಸ ರೀತಿಯ ನೌಕರ ಶಾಹಿಯ ಆಡಳಿತೆ ವರ್ಗವೂ ಶೋಷಣೆಯ ಹೊಸ ರೀತಿಗಳೂ ಬೆಳೆದು ಬಂದಿರುವ ದನ್ನು ನಾವು ಕಂಡಿದ್ದೇವೆ. ]

ಚೀನದಲ್ಲಿ ತಲೆಯೆತ್ತಿದ ಸಮತಾವಾದವೂ ಇದಕ್ಕಿಂತ ಭಿನ್ನವಾಗಿಲ್ಲ. ಯಾವ ಸಮತಾವಾದದಿಂದ ದೀನ ದಲಿತರ ಉದ್ಧಾರವಾಗುತ್ತದೆಂದು ಮಾರ್ಕ್ಸ ಮತ್ತು ಏಂಜೆಲ್ಸ ನಂಬಿದ್ದರೋ ಅದೇ ಸಮತಾವಾದವು ಇಂದು ಮಾನವತೆಯ ಶತ್ರುವಾಗಿ ಪರಿಣಮಿಸಿದೆ.. ಅದೊಂದು ಭಯಂಕರ ಸ್ವಪ್ನ ವೆನಿಸಿದೆ.

ಹೀಗೆ ಹಿಂಸೆ ಹಾಗೂ ಕಾರ್ಯಗಳಿಂದ ಆರ್ಥಿಕ ಕೇಂದ್ರೀಕರಣದಿಂದ ವ್ಯಕ್ತಿ ಸ್ವಾತಂತ್ರ್ಯಾಪಹರಣದಿಂದ, ರಾಜಕೀಯ ಸರ್ವಾಧಿಕಾರಿತ್ವದಿಂದ ಒಡ ಗೂಡಿದ ಸಮತಾವಾದವು ಮಾನವನಿಗೆ ತಾರಕ ಯಂತ್ರವಾಗಿರದೇ ಒಂದು ಶಾಪವಾಗಿ ಪರಿಣಮಿಸಿದೆ.

೩) **ಸಮಾಜವಾದ:—** ಸಮಾಜವಾದವು ಸಮತಾವಾದದಷ್ಟು ಕ್ರೂರವೂ ಭಯಾನಕವೂ ಆಗಿಲ್ಲ. ಅಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೂ ಪ್ರಜಾ ಪ್ರಭುತ್ವಕ್ಕೂ ಅವಕಾಶವಿದೆ. ಸಮತಾವಾದದ ಅಮಾನುಷತೆ ಅಲ್ಲಿ ಹೆಚ್ಚಾಗಿ ಕಂಡು ಬರುವದಿಲ್ಲ.

ಆದರೂ ಸಮಾಜವಾದವು ಮಾನವನಿಗೆ ತಾರಕ ಮಂತ್ರವಾಗಲಾರದು. ಯಾಕಂದರೆ ಅಲ್ಲಿ ಉತ್ಪಾದನೆಯ ಕೇಂದ್ರೀಕರಣವು ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಪ್ರಜಾಪ್ರಭುತ್ವಕ್ಕೆ ಅವಕಾಶವಿದ್ದರೂ ವ್ಯಕ್ತಿಗಳಿಗೆ ಸಂಪೂರ್ಣ ವಾದ ಸ್ವಾತಂತ್ರ್ಯ ದೊರೆಯಲಾರದು. ಮತ್ತು ಪ್ರಜಾಪ್ರಭುತ್ವವೂ ಕೂಡ ಬಹುಮತದ ಆಡಳಿತವಾಗುತ್ತದೆಯೇ ಹೊರತಾಗಿ ಅದು ಸರ್ವಸಮ್ಮತವಾದ ರಾಜ್ಯಭಾರವಾಗುವದಿಲ್ಲ.

ಈ ಕಾರಣಗಳಿಂದಾಗಿ ಸಮಾಜವಾದದಿಂದಲೂ ಮಾನವನ ಉದ್ಧಾರ ವಾಗಲಾರದು.

೪) **ಸರ್ವೋದಯ:**— ಸರ್ವೋದಯುವು ಮಾನವನಿಗೆ ಇರುವ ಒಂದೇ ಒಂದು ಆಶಾ ದೀಪವಾಗಿದೆ. ತಾರಕಮಂತ್ರವಾಗಿದೆ. ರಾಜಮಾರ್ಗ ವಾಗಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಸರ್ವೋದಯುದ ಮೊದಲನೆಯ ಗುಣವೆಂದರೆ ಅದು ಅಹಿಂಸಾತ್ಮಕ ವಾದ ಸಾಧನಗಳಲ್ಲಿ ವಿಶ್ವಾಸವುಳ್ಳದ್ದಾಗಿದೆ. ಸರ್ವೋದಯುದಲ್ಲಿ ಯಾರ ಮೇಲೆಯೂ ಒತ್ತಾಯ ಅಹಿಂಸೆ ನಡೆಯುವದಿಲ್ಲ. ಸರ್ವೋದಯುದ ಮಾರ್ಗವು ಹೃದಯ ಪರಿವರ್ತನೆಯ ಮಾರ್ಗವಾಗಿದೆ. ಒಬ್ಬ ವ್ಯಕ್ತಿ ಸ್ವಸಂತೋಷ ದಿಂದ ಆತ್ಮ ಸಾಕ್ಷಿಯಿಂದ ಪರಿವರ್ತನೆ ಹೊಂದಲು ಅಲ್ಲಿ ಅವಕಾಶವನ್ನು ಕೊಡಲಾಗುತ್ತದೆ.

ಸರ್ವೋದಯುದ ಎರಡನೆಯ ಗುಣವೆಂದರೆ ಅದು ಸಾಧನಗಳ ಪವಿತ್ರ-ತೆಯ ಬಗ್ಗೆ ಬಹಳ ಜಾಗರೂಕವಾಗಿರುತ್ತದೆ. ನಮ್ಮ ಧ್ಯೇಯಗಳು ಎಷ್ಟು ಉದಾತ್ತ ಹಾಗೂ ಪವಿತ್ರವಾಗಿರುವವೋ ಅಷ್ಟೇ ನಮ್ಮ ಸಾಧನಗಳೂ ಉದಾತ್ತ ಹಾಗೂ ಪವಿತ್ರವಾಗಿಲೇಬೇಕೆಂದು ಅದು ಸಾರುತ್ತದೆ. ಅನ್ಯಾಯದ ಅಪವಿತ್ರವಾದ, ಅನೀತಿಕರವಾದ ಪಾಪಮಯವಾದ ಸಾಧನಗಳಿಂದ ಉದಾತ್ತ ವಾದ ಉಚ್ಚವಾದ ಆದರ್ಶವಾದ ಧ್ಯೇಯವನ್ನು ನಾವು ಎಂದೂ ಸಾಧಿಸಲಾ ರೆವು ಎಂದು ಅದು ಘಂಟಾಘೋಷವಾಗಿ ಹೇಳುತ್ತದೆ.

"End justifies means" " ಗುರಿಯನ್ನು ತಲುಪುವದಕ್ಕೆ ಎಂಥ ಸಾಧನಗಳಿದ್ದರೂ ಅವು ಒಳ್ಳೆಯವೇ " ಎಂಬ ತತ್ತ್ವವು ಸರ್ವೋದಯಕ್ಕೆ ಮಾನ್ಯವಿಲ್ಲ ಮಹಾತ್ಮಾಜಿಯವರು ಸಾಧನಗಳ ಮಾತನಾಡುತ್ತ:

"I feel too that our progress towards the goal will be in exact proportion to the purity of our means".

[ ನಮ್ಮ ಸಾಧನಗಳು ಎಷ್ಟೆಷ್ಟು ಪವಿತ್ರವಾಗಿರುವವೋ ಅಷ್ಟಷ್ಟೇ ನಾವು ನಮ್ಮ ಗುರಿಯೆಡೆಗೆ ಪ್ರಗತಿಯನ್ನು ಹೊಂದುವವೆಂದು ನನ್ನ ಭಾವನೆ.]

ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಸಾಧನಗಳ ಪವಿತ್ರತೆಗೆ ಸರ್ವೋ ದಯುದಲ್ಲಿ ಬಹಳ ಮಹತ್ವದ ಸ್ಥಾನವಿದೆ. ಅನ್ಯಾಯುದ ಮಾರ್ಗಗಳಿಂದ ಅನೈತಿಕ ಮಾರ್ಗಗಗಳಿಂದ ಹಿಂಸೆಯ ಮಾರ್ಗಗಳಿಂದ ಸರ್ವೋದಯುದ ಗುರಿ

ಯನ್ನು ನಾವು ಸಾಧಿಸಲಾರೆವು ಎಂಬ ತಿಳುವಳಿಕೆಯನ್ನು ಪ್ರತಿಯೊಬ್ಬ ಸರ್ವೋದಯ ಕಾರ್ಯ ಕರ್ತನಲ್ಲಿ ಹುಟ್ಟಿಸಲಾಗುತ್ತದೆ.

ಸರ್ವೋದಯದ ಮೂರನೆಯ ಗುಣವೆಂದರೆ ಸತ್ಯ, ಅಹಿಂಸೆ, ನೀತಿ, ಧರ್ಮ, ಆತ್ಮ, ದೇವರು ಮೊದಲಾದ ಉಚ್ಚ ಮಾನವೀಯ ಮೌಲ್ಯಗಳನ್ನು ಅದು ಮನ್ನಿಸುತ್ತದೆ. ಸಕಲ ಧರ್ಮಗಳೂ ದೇವನೆಡೆಗೆ ನಮ್ಮನ್ನು ಕರೆದೊಯ್ಯುವ ಮಾರ್ಗಗಳೆಂದು ಅದು ನಂಬುತ್ತದೆ. ಸತ್ಯ, ಪ್ರೇಮ, ಅಹಿಂಸೆ, ಸಹಿಷ್ಣುತೆ, ಕ್ಷಮೆ, ತ್ಯಾಗ ಇವೇ ಮೊದಲಾದ ಸದ್ಗುಣಗಳನ್ನು ಬೆಳೆಸಲು ಅದು ಬಹಳಷ್ಟು ಪ್ರಯತ್ನಿಸುತ್ತದೆ. ಆದುದರಿಂದ ಮನುಷ್ಯನು ಯುಗ ಯುಗಗಳಿಂದ ಹಂಬಲಿಸುತ್ತಿರುವ ಸತ್ಯ ಪ್ರೇಮ ಅಹಿಂಸೆ ಕ್ಷಮೆ ತ್ಯಾಗ ಮೊದಲಾದವುಗಳಿಂದ ಒಡಗೂಡಿದ ಆದರ್ಶ ಸಮಾಜರಚನೆಯು ಸರ್ವೋದಯದಿಂದ ಮಾತ್ರವೇ ಸಾಧ್ಯವಾಗುತ್ತದೆ ಎಂಬದು ನಿರ್ವಿವಾದವಾಗಿದೆ.

ಸರ್ವೋದಯದ ನಾಲ್ಕನೆಯ ಗುಣವೆಂದರೆ ವ್ಯಕ್ತಿಸ್ವಾತಂತ್ರ್ಯ. ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಮಾನವನು ಪ್ರಾಚೀನಕಾಲದಿಂದಲೂ ಹೋರಾಡುತ್ತ ಬಂದಿದ್ದಾನೆ. ದಾಸ್ಯ ಗುಲಾಮಗಿರಿಗಳ ವಿರುದ್ಧ ಅವನು ಹಲವು ಸಲ ಬಂಡೆದ್ದಿಸಿದ್ದಾನೆ. ಯುದ್ಧ ಹೂಡಿದ್ದಾನೆ. ಇಷ್ಟು ಪರಿಶ್ರಮದಿಂದ ಮಾನವನು ಕಾಯ್ದುಕೊಂಡು ಬಂದ ವ್ಯಕ್ತಿಸ್ವಾತಂತ್ರ್ಯವು ಇಂದಿನ ವಿಜ್ಞಾನಯುಗದಲ್ಲಿ ಹಲವು ರೀತಿಯಲ್ಲಿ ಹತ್ತಿಕ್ಕಲ್ಪಟ್ಟಿದೆ. ರಾಜಕೀಯರಂಗದಲ್ಲಿ (God state) ರಾಷ್ಟ್ರದ ಶ್ರೇಷ್ಠತೆಯ ಕಲ್ಪನೆ. ಉದಯವಾಗಿ ರಾಷ್ಟ್ರಕ್ಕಾಗಿ ವ್ಯಕ್ತಿ ಎಂಬ ವಿಚಾರಪ್ರಣಾಲಿಯು ಈಗ ಪ್ರಬಲವಾಗಿದೆ. ರಾಷ್ಟ್ರದ ಹಿತಕ್ಕಾಗಿ ವ್ಯಕ್ತಿಯನ್ನು ಬಲಿಗೊಡಬೇಕು ಎಂಬ ತತ್ತ್ವವು ಪ್ರಚಾರಗೊಂಡಿದೆ. ಇದರ ಪರಿಣಾಮವಾಗಿ ಸರ್ವಾಧಿಕಾರೀ ರಾಷ್ಟ್ರಗಳು ಉದಯಿಸಿ ವ್ಯಕ್ತಿಗಳನ್ನು ನಿರ್ದಯವಾಗಿ ಬಲಿಗೊಟ್ಟಿದ್ದಾರೆ. ಬಲಿಗೊಡುತ್ತಲಿದ್ದಾರೆ. ನಾಝಿ ಜರ್ಮನಿ ಫ್ಯಾಶಿಷ್ಟ ಇಟಲಿಗಳು ಇದಕ್ಕೆ ಉತ್ತಮವಾದ ಉದಾಹರಣೆಯಾಗಿವೆ. ಪ್ರಜಾಪ್ರಭುತ್ವದಲ್ಲಿಯೂ ಕೂಡ ವ್ಯಕ್ತಿಗೆ ಮತಾಧಿಕಾರವಿದ್ದರೂ ಬಹು ಮತದ ಒಲುಮೆಗೆ ವ್ಯಕ್ತಿಸ್ವಾತಂತ್ರ್ಯವು ಸಿಕ್ಕು ನುಚ್ಚು ನೂರಾಗುತ್ತಲಿದೆ. ಅಲ್ಪಸಂಖ್ಯಾಕರನ್ನು ಬಹುಸಂಖ್ಯಾಕರು ಬೇಕಾದಂತೆ ದಬ್ಬಾಳಿಕೆಗೆ ಒಳಗಾಗಿಸಲು ಅವಕಾಶವಿದೆ.

ಆರ್ಥಿಕರಂಗದಲ್ಲಿ ಸಮತಾವಾದ ಸಮಾಜವಾದಗಳು ತಲೆದೋರಿ ವ್ಯಕ್ತಿ ಸ್ವಾತಂತ್ರ್ಯವನ್ನು ಬಲಿಗೊಂಡಿವೆ. ಕಮ್ಯುನಿಸ್ಟ ಆರ್ಥಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಜೀವಕ್ಕೂ ಜೀವಿತಕ್ಕೂ ಒಂದು ಕವಡೆಯ ಬೆಲೆಯೂ ಇಲ್ಲ. ಅಲ್ಲಿ (Liquidation of the Individual) ವ್ಯಕ್ತಿಯ ನಾಶ ವೆಂಬುದು ಸರ್ವಸಾಮಾನ್ಯವಾದ ನಿಯಮವಾಗಿದೆ. ಸ್ಟಾಲಿನ್ ನಡೆಯಿಸಿದ ಅಸಂಖ್ಯಾತ ವಾದ ಅಮಾನುಷ ಕೊಲೆಗಳು ಸಮತಾವಾದದಲ್ಲಿ ವ್ಯಕ್ತಿಯನ್ನು ಎಷ್ಟು ಕೀಳಾಗಿ ಕಾಣುತ್ತಾರೆಂಬುದಕ್ಕೆ ಉತ್ತಮವಾದ ಉದಾಹರಣೆಗಳಾಗಿವೆ. ಸಮತಾವಾದದಲ್ಲಿ ವ್ಯಕ್ತಿಗಳೆಂದರೆ ಜೀವಜಂತುಗಳಾಗಿವೆ. ತಗಣಿ, ಚಿಕ್ಕಾಡು, ಗುಂಗಾಡುಗಳ ಜೀವಕ್ಕಿದ್ದ ಬೆಲೆಯೂ ಅಲ್ಲಿ ವ್ಯಕ್ತಿಗಳ ಜೀವಕ್ಕಿಲ್ಲ.

ಪ್ರಜಾಪ್ರಭುತ್ವ ರಾಜ್ಯಪದ್ಧತಿಗಳಲ್ಲಿಯೂ ಔದ್ಯೋಗೀಕರಣದ ಫಲ ವಾಗಿ ವ್ಯಕ್ತಿಯು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಾನೆ. ಇಂದಿನದೆಲ್ಲ ಬರೀ Mass Production ದೊಡ್ಡ ಪ್ರಮಾಣದ ಉತ್ಪಾದನೆ ಯುಗ. ಈ ಉತ್ಪಾದನೆಗೆ ಯಾಂತ್ರೀಕರಣವೇ ಸಾಧನೆ. ಈ ಯಾಂತ್ರೀಕರಣದಲ್ಲಿ ಮನುಷ್ಯನೂ ಒಂದು ಯಂತ್ರವಾಗಿದ್ದಾನೆ. ಬರೀ ಯಂತ್ರವೂ ಅಲ್ಲ, ಯಂತ್ರದ ಒಂದು ಮೊಳೆ (cog of the machine) ಯಾಗಿದ್ದಾನೆ. ಹೀಗೆ ತನ್ನ ಆತ್ಮವನ್ನು ಕಳೆದುಕೊಂಡ ಇಂದಿನ ಮಾನವನಲ್ಲಿ ಆತ್ಮಜಾಗೃತಿಯನ್ನು ಮಾಡಿ ವ್ಯಕ್ತಿಸ್ವಾತಂತ್ರ್ಯವನ್ನು ಒದಗಿಸಿಕೊಡುವ ಒಂದೇ ಒಂದು ಸಾಮಾಜಿಕ ವ್ಯವಸ್ಥೆಯೆಂದರೆ ಸರ್ವೋದಯವಾಗಿದೆ.

ಸರ್ವೋದಯದ ಐದನೆಯ ಗುಣವೆಂದರೆ ಉತ್ಪಾದನೆಯ ವಿಕೇಂದ್ರೀ ಕರಣ. ಇಂದಿನ ಜಗತ್ತಿನ ಸಮಸ್ಯೆಗಳೆಲ್ಲವೂ ಉತ್ಪಾದನೆಯ ಕೇಂದ್ರೀಕರಣ ದಿಂದ ದೊಡ್ಡ ದೊಡ್ಡ ಕಾರಖಾನೆಗಳು ತಲೆದೋರಿವೆ. ಕಾರಖಾನೆಗಳಲ್ಲಿ ದುಡಿಯುವವರೆಲ್ಲ ಶೋಷಣೆಗೆ ಒಳಗಾಗಿದ್ದಾರೆ. ದೊಡ್ಡ ಪ್ರಮಾಣದ ಉತ್ಪಾ ದನೆಯಿಂದ ಕೃತ್ರಿಮ ವಾತಾವರಣವುಳ್ಳ ಪಟ್ಟಣಗಳು ತಲೆ ಎತ್ತಿವೆ. ಈ ಪಟ್ಟ ಣಗಳಲ್ಲಿಯ ಜೀವನ ಯಾಂತ್ರಿಕವಾಗಿ ಮನುಷ್ಯನೂ ಯಂತ್ರವಾಗಿದ್ದಾನೆ. ದೊಡ್ಡ ಪ್ರಮಾಣದ ಉತ್ಪಾದನೆಯು ವಿತರಣೆಯ ಸಮಸ್ಯೆಯನ್ನು ಬಹಳ ಜಟಿಲಗೊಳಿಸಿದೆ. ಉತ್ಪಾದಿಸಿದ ವಸ್ತುಗಳನ್ನು ವಿತರಣೆಗೊಳಿಸಲು ಅನಭಿ ವೃದ್ಧ ದೇಶಗಳನ್ನು ವಸಹಾತುಗಳನ್ನಾಗಿ ಆಕ್ರಮಿಸಬೇಕಾಗುತ್ತದೆ. ತಮ್ಮ

ಸರಕುಗಳಿಗೆ ಪೇಟೆಗಳನ್ನು ದೊರಕಿಸುವದಕ್ಕಾಗಿ ರಾಷ್ಟ್ರ ರಾಷ್ಟ್ರಗಳಲ್ಲಿ ಸ್ಪರ್ಧೆ ನಡೆದು ಜಾಗತಿಕ ಯುದ್ಧವು ತಲೆದೋರುತ್ತದೆ. ಹೀಗಾಗಿ ಕೇಂದ್ರೀಕೃತ ಉತ್ಪಾದನೆಯಿಂದ ಮತ್ತು ಉತ್ಪಾದನೆಯ ಯಾಂತ್ರೀಕರಣದಿಂದ ಇಂದಿನ ಜಗತ್ತಿನಲ್ಲಿಯ ಮುಖ್ಯವಾದ ಸಾಮಾಜಿಕ, ರಾಜಕೀಯ, ಆರ್ಥಿಕ ತೊಡಕುಗಳೆಲ್ಲ ಉಂಟಾಗಿವೆ.

ಈ ತೊಡಕುಗಳೆಲ್ಲ ಬಿಟ್ಟು ಮಾನವ ಜನಾಂಗವು ಸುಖ ಶಾಂತಿಗಳನ್ನು ಕಾಣಬೇಕಾದರೆ ಮೊದಲು ಉತ್ಪಾದನೆಯ ವಿಕೇಂದ್ರೀಕರಣವಾಗಬೇಕು. ಉತ್ಪಾದನೆಯ ವಿಕೇಂದ್ರೀಕರಣವಿಲ್ಲದೇ ವರ್ಗರಹಿತ ಶೋಷಣ ರಹಿತ ಸಮಾಜವನ್ನು ನಿರ್ಮಿಸುವೆವೆಂದು ಹೇಳುವದು ಮಳಲ ರಾಶಿಯ ಮೇಲೆ ಅರಮನೆಯನ್ನು ಕಟ್ಟುತ್ತೇವೆಂದು ಹೇಳಿದಂತೆಯೇ. ಯಾವ ಕ್ಷಣದಲ್ಲಿಯೂ ಆ ಅರಮನೆ ಕುಸಿದು ಬೀಳಬಹುದು.

ಸರ್ವೋದಯದಲ್ಲಿ ಈ ಭಯವಿಲ್ಲ. ಸರ್ವೋದಯದ ಅರ್ಥಶಾಸ್ತ್ರವು ಮಾನವತೆಯ ಅರ್ಥಶಾಸ್ತ್ರವಾಗಿದೆ. ಉಳಿದೆಲ್ಲ ಅರ್ಥಶಾಸ್ತ್ರಗಳೂ ಅಮಾನುಷವಾಗಿವೆ. ಅಲ್ಲಿ ದಯೆಗೆ, ಧರ್ಮಕ್ಕೆ ನೀತಿಗೆ ಸ್ಥಾನವೇ ಇಲ್ಲ. ಸರ್ವೋದಯ ಅರ್ಥಶಾಸ್ತ್ರವೊಂದೇ ನೈತಿಕ ಮೂಲ್ಯಗಳನ್ನು ಮಾನವೀಯ ಮೂಲ್ಯಗಳನ್ನು ಮನ್ನಿಸುತ್ತದೆ. ಆದುದರಿಂದ ಅದು ಶೋಷಣರಹಿತವಾಗಿದೆ. ಶೋಷಣೆಯನ್ನು ತೊಡೆದು ಹಾಕಲು ಅದು ಉತ್ಪಾದನೆಯ ವಿಕೇಂದ್ರೀಕರಣವನ್ನೂ ರಾಜಕೀಯ ಅಧಿಕಾರ ವಿಕೇಂದ್ರೀಕರಣವನ್ನು ಒಪ್ಪಿ ಕೊಳ್ಳುತ್ತದೆ.

ಆರ್ಥಿಕ ಹಾಗೂ ರಾಜಕೀಯ ಅಧಿಕಾರದ ವಿಕೇಂದ್ರೀಕರಣವನ್ನು ಸಾಧಿಸುವದೇ ಸರ್ವೋದಯದ ಮೊದಲನೆಯ ಕೆಲಸವಾಗಿದೆ. ಅದಕ್ಕಾಗಿ ಅದು ಸತ್ಯ ಅಹಿಂಸೆಗಳ ಮಾರ್ಗವನ್ನು ಹಿಡಿದು ಹೊರಟಿದೆ.

ಆರ್ಥಿಕ ಹಾಗೂ ರಾಜಕೀಯ ಅಧಿಕಾರದ ವಿಕೇಂದ್ರೀಕರಣದಿಂದ ವ್ಯಕ್ತಿ ಸ್ವಾತಂತ್ರ್ಯವು ಉಳಿಯುತ್ತದೆ; ಶೋಷಣೆ ನಿಲ್ಲುತ್ತದೆ; ಮಾನವತೆ ಬದುಕುತ್ತದೆ; ಸುಖ ಶಾಂತಿಗಳು ನೆಲಸುತ್ತವೆ.

ಹೀಗೆ ಎಲ್ಲ ದೃಷ್ಟಿಯಿಂದಲೂ ಸರ್ವೋದಯವು ಮಾನವನಿಗೆ ಒಂದು ದೈವೀವರ ಪ್ರದಾನವಾಗಿದೆ. ಇಂದಿನ ಎಲ್ಲ "Ism" "ವಾದ" ಗಳಲ್ಲಿ ಸರ್ವೋದಯವೇ ಸರ್ವೋತ್ಕೃಷ್ಟವಾಗಿದೆ.

ಅದರಲ್ಲಿಯೂ ಇಂದಿದ ಅಣ್ವಸ್ತ್ರಗಳ ಮಾರಣ ಹೋಮ ಧೂಮದಲ್ಲಿ ದಿಕ್ಕುಗಾಣದೇ ಹರಿದಾಡುತ್ತಿರುವ ಮಾನವ ಜನಾಂಗಕ್ಕೆ ಸರ್ವೋದಯ ಒಂದೇ ಪರಿಹಾರವನ್ನು ಒದಗಿಸಬಲ್ಲದು. ಮಾನವ ಜನಾಂಗವು ಅಣ್ವಸ್ತ್ರಗಳ ಮಹಾಯುದ್ಧದ ಭೀಕರ ಪರಿಣಾಮಗಳಿಂದ ಪಾರಾಗಬೇಕಾದರೆ ಸರ್ವೋದಯಕ್ಕೆ ಶರಣು ಹೋಗಲೇಬೇಕು. ಇಂದು ಜಗತ್ತಿನ ಮುಂದೆ ಎರಡೇ ಎರಡು ದಾರಿಗಳಿವೆ. ಒಂದು ಸರ್ವೋದಯ ಇನ್ನೊಂದು ಸರ್ವನಾಶ. ಇವುಗಳನ್ನು ಬಿಟ್ಟು ಮೂರನೆಯ ಮಾರ್ಗವೇ ಇಂದು ಉಳಿದಿಲ್ಲ. ಆದುದರಿಂದ ಮಾನವನು ಇಂದು ಬದುಕಿ ಬಾಳಬೇಕಾದರೆ ಸರ್ವೋದಯವೊಂದೇ ಅವನಿಗೆ ತಾರಕಮಂತ್ರವಾಗಿದೆ.

# ಜೈ ಜಗತ್ !

ಜಗತ್ತಿಗೆ ಇಂದು ತಾರಕಮಂತ್ರವಾದ ಸರ್ವೋದಯ ಸಮಾಜವನ್ನು ಸ್ಥಾಪಿಸಲು ಭಾರತದಲ್ಲಿ ಪ್ರಯತ್ನವು ನಡೆದಿದೆ. ಮತ್ತು ಇಂಥ ಪ್ರಯತ್ನವು ಭಾರತದಲ್ಲಿ ಮಾತ್ರ ನಡೆಯುವದು ಶಕ್ಯವಿದೆ. ಯಾಕಂದರೆ ಭಾರತವು ಆಧ್ಯಾತ್ಮಿಕತೆಯ ತವರು ಮನೆಯಾಗಿದೆ. ಜಗತ್ತಿನ ಎಲ್ಲ ಧರ್ಮ ಪಂಥಗಳೂ ಇಲ್ಲಿ ಆಶ್ರಯ ಪಡೆದಿವೆ. ಅಹಿಂಸಾತ್ಮಕ ಹೋರಾಟದಿಂದ ಭಾರತವು ಸ್ವಾತಂತ್ರ್ಯವನ್ನು ಪಡೆದು ಜಗತ್ತಿನ ಇತಿಹಾಸದಲ್ಲಿ ಕ್ರಾಂತಿಯನ್ನು ಮಾಡಿದೆ. ಈಗಲೂ ಕೂಡ ಅಂತರ ರಾಷ್ಟ್ರೀಯ ರಾಜಕಾರಣದಲ್ಲಿ ಭಾರತವು ತನ್ನ ನೈತಿಕ ಬಲದಿಂದ ಶಾಂತಿ ದೂತನೆಂದು ಎನಿಸಿಕೊಂಡಿದೆ. ಜಗತ್ತಿನ ದೀನ ದಲಿತರು ದಾಸ್ಯಕ್ಕೊಳಗಾದವರು ಭಾರತದೆಡೆಗೆ ತಮ್ಮ ಉದ್ಧಾರಕ್ಕಾಗಿ ಆಶಾ ದೃಷ್ಟಿ ಯಿಂದ ನೋಡುತ್ತಲಿದ್ದಾರೆ. ಆದುದರಿಂದ ಮಾನವ ಕುಲದ ಆಶಾದೀಪ ವಾದ ಸರ್ವೋದಯದ ಪ್ರಯೋಗವು ಭಾರತದಲ್ಲಿಯೇ ನಡೆದಿರುವದು ಔಚಿತ್ಯ ಪೂರ್ಣವಾಗಿದೆ.

ಈ ಸರ್ವೋದಯ ಯಾತ್ರೆಯಲ್ಲಿ ಭೂದಾನ, ಗ್ರಾಮದಾನದ ವರೆಗೆ ಬಂದು ತಲುಪಿದ್ದೇವೆ. ಆದರೆ ಗ್ರಾಮದಾನವೇ ಸರ್ವೋದಯದ ಕೊನೆಯ ಮೆಟ್ಟಲಲ್ಲ. ಸರ್ವೋದಯದ ಗುರಿಯು ವಿಶ್ವಮಾನವತೆಯಾಗಿದೆ. ವಿಶ್ವ ಮಾನವತೆಯು ಆಧ್ಯಾತ್ಮಿಕ ಸಿದ್ಧಿಯಾಗಿದೆ. ಆದುದರಿಂದ ಸರ್ವೋದಯದ ಆದರ್ಶವೂ ಆಧ್ಯಾತ್ಮಿಕವಾಗಿದೆ. ಸರ್ವೋದಯವು ಒಂದು ರಾಜಕೀಯ ಕಲ್ಪನೆ, ಒಂದು ಆರ್ಥಿಕ ಆದರ್ಶ, ಒಂದು ಸಾಮಾಜಿಕ ಸಿದ್ಧಿಯೆಂದು ತಿಳಿದುಕೊಂಡ ವರು ಸರ್ವೋದಯವನ್ನು ಅರ್ಥಮಾಡಿಕೊಂಡಿಲ್ಲವೆಂದು ಹೇಳಬಹುದು. ಈ ವಿಷಯದಲ್ಲಿ ವಿನೋಬಾ ಅವರು ಬಹಳ ಸ್ಪಷ್ಟವಾಗಿ ಮಾತನಾಡಿದ್ದಾರೆ. ಬೆಂಗಳೂರಿನಲ್ಲಿ ೧೯೫೭ನೆಯ ಅಕ್ಟೋಬರದಲ್ಲಿ ಮಾತನಾಡುತ್ತ ವಿನೋಬಾ ಹೀಗೆ ಹೇಳಿದ್ದಾರೆ :

" ಗ್ರಾಮದಾನ ಮುಂತಾದುದರಿಂದ ಭೂಮಿಯ ಪ್ರಶ್ನೆ ಬಿಡುತ್ತ ದೆಂಬುದು ಚಿಕ್ಕ ವಿಷಯ. ಚಿಂತನದ ಮಟ್ಟ ಮೇಲೇರುತ್ತದೆಂಬುದು ದೊಡ್ಡ

ವಿಷಯು. ನಮ್ಮ ಇಡೀ ಹಳ್ಳಿ ಒಂದು ಕುಟುಂಬವಾದೀತು. ಅಲ್ಲಿ ದೇವರ ಕೊಡುಗೆಯಾದ ಗಾಳಿ, ನೀರು, ನೆಲ ಎಲ್ಲರಿಗಾಗಿ ಇದ್ದೀತು. ಪರಸ್ಪರ ಸಹಕಾರ ದಿಂದ ಕೆಲಸ ಮಾಡುತ್ತೇನೆ. ನನ್ನದಲ್ಲ, ಇಡೀ ಸಮಾಜದ ಚಿಂತೆ ಮಾಡು ತ್ತೇನೆ. ಈ ವೃತ್ತಿ ಇಡೀ ಸಮಾಜದ ನೈತಿಕ ಮಟ್ಟವನ್ನೇ ಪೂರಾ ಬದಲಿ ಸೀತು. ಆದರಿಂದ ನನಗೆ ಈ ಚಳುವಳಿಯಲ್ಲಿ ಉತ್ಸಾಹ.........

ಹೊಸ ಮಾನವನನ್ನು ನಿರ್ಮಿಸಬೇಕಾಗಿದೆ ನಾವು. ಹಳೆಯದು ಮುಗಿ ಯಿತು. ಈಗ ದೇಶಗಳ ಎಲ್ಲೆಗಳೂ ಉಳಿಯುವಂತಿಲ್ಲ. ಒಮ್ಮೆ ಆಸ್ಟ್ರೇಲಿ ಯಾದ ಒಬ್ಬ ತಮ್ಮ ಭೇಟಿಗೆ ಬಂದಿದ್ದ. 'ಈ ಭೂದಾನದ್ದು ಜಗತ್ತಿಗೇನು ಸಂದೇಶ ?' ಎಂದ. 'ಆಸ್ಟ್ರೇಲಿಯಾದಲ್ಲಿ ಬಹಳ ಭೂಮಿಯಿದೆ. ಜಪಾನಿನಲ್ಲಿ ಇಲ್ಲ. ನೀವು ಜಪಾನಿನವರನ್ನು ಕರೆಯಬೇಕು—ಇದೇ ಅರ್ಥ' ಎಂದೆ. ಅದನ್ನು ಕೇಳಿ ಆ ಬಡಪಾಯಿ ಹಾಗೆಯೇ ನೋಡುತ್ತ ಕುಳಿತ. 'ನಮ್ಮಲ್ಲಿ ಭೂಮಿ ಯೇನೋ ಬೇಕಾದಷ್ಟಿದೆ. ಆದರೆ ನಮ್ಮ ಸಂಸ್ಕೃತಿಯ ರಕ್ಷಣೆಯಾಗಬೇ ಕೆಂದು ನಮ್ಮ ಇಷ್ಟ. ನಮ್ಮ ಸಂಸ್ಕೃತಿಗೆ ಮೇಳಗೂಡುವ ಯುರೋಪಿನ ಜನ ಬಂದರೆ ಅವರನ್ನು ತೆಗೆದುಕೊಳ್ಳುತ್ತೇವೆ' ಎಂದ. ಈ ವಿಷಯವನ್ನು ನಾಶ ಮಾಡಲಿಕ್ಕೇ ಭೂದಾನ ಯಜ್ಞ ನಡೆಯುತ್ತಿದೆ. ಜಪಾನಿನ ಸಭ್ಯತೆ ಬೇರೆ, ಆಸ್ಟ್ರೇಲಿಯಾ ಯುರೋಪುಗಳದೇ ಬೇರೆ, ಹಿಂದುಸ್ತಾನದ್ದೇ ಬೇರೆ, ಹಿಂದೂ ಗಳದೇ ಬೇರೆ, ಮುಸಲ್ಮಾನರದೇ ಬೇರೆ, ಇದೆಲ್ಲಾ ಅಭದ್ರ ಮಾತು. ಇದನ್ನು ಅಳಿಸಲೆಂದೇ ಭೂದಾನ ಯಜ್ಞ. ಭೂದಾನದಲ್ಲಿ ಚಿಕ್ಕ ಗುರಿಯಿಲ್ಲ. ಮಾನವ ಜೀವನವನ್ನು ಬದಲಿಸಿ ಹೊಸ ವಿಶ್ವ ಮಾನವನನ್ನು ನಿರ್ಮಿಸಬೇಕು ..."

ಹೀಗೆ ಮತ, ಪಂಥ, ಧರ್ಮ, ಜಾತಿ, ದೇಶ, ಕಾಲಗಳಿಗೆ ಅತೀತನಾದ ವಿಶ್ವಮಾನವನನ್ನು ನಿರ್ಮಿಸುವದೇ ಸರ್ವೋದಯದ ಗುರಿಯಾಗಿದೆ.

ಆದರೆ ಈ ಗುರಿ ಇಂದು ಸಾಧಿಸಿದೆಯೇ ? ಎಂದು ಸರ್ವೋದಯದ ಆಕ್ಷೇಪಕರು ಕೇಳುತ್ತಾರೆ. ಅವರ ಆಕ್ಷೇಪಣೆಗೆ ಉತ್ತರವಿಷ್ಟ. ಇಂದು ಸರ್ವೋ ದಯದ ಈ ಗುರಿ ಸಾಧಿಸಿಲ್ಲ. ಅದರೆಡೆಗೆ ಸಾಗಲು ಪ್ರಯತ್ನ ನಡೆದಿದೆ.

ಈ ಪ್ರಯತ್ನದಲ್ಲಿಯೂ ಸಾಕಷ್ಟು ಯಶಸ್ಸು ಬಂದಿಲ್ಲವೆಂದು ವಿಷಾದ ದಿಂದ ಹೇಳಬೇಕಾಗಿದೆ. ಆದರೆ ಈ ಅಯಶಸ್ಸಿಗೆ ಕಾರಣ ನಾವೇ ಎಂದು

ಹೇಳಬಹುದು. ಇಂದು ಸಾಮಾನ್ಯ ಜನತೆ ಸರ್ವೋದಯವೆಂದರೆ ಒಂದು ರಾಜಕೀಯ ಆರ್ಥಿಕ ಚಳುವಳಿಯೆಂದು ತಿಳಿದಿದೆ. ಆದುದರಿಂದ ಆ ದೃಷ್ಟಿ ಯಿಂದಲೇ ಅದನ್ನು ನೋಡುತ್ತಲಿದೆ. ಅದರ ಬದಲಾಗಿ ಸರ್ವೋದಯವು ಜಾತಿ ಮತ ಪಂಥ ಧರ್ಮ ಭಾಷ ದೇಶಗಳನ್ನು ಮೀರಿದ ವಿಶ್ವಮಾನವತೆಯ ಸಕಲ ಕಲ್ಯಾಣದ ಒಂದು ಆದರ್ಶ ಅದನ್ನು ಮುಟ್ಟಲು ಪ್ರಯತ್ನಿಸುವದು ಎಲ್ಲರ ಕರ್ತವ್ಯ. ಮತ್ತು ಸರ್ವೋದಯದಿಂದಲೇ ಜಗತ್ತಿನ ಉದ್ಧಾರ ಎಂಬ ದನ್ನು ಮನದಟ್ಟು ಮಾಡಿಕೊಂಡು ಸರ್ವೋದಯ ಪ್ರವರ್ತನೆಗೆ ಮುಂದಾದರೆ ಸರ್ವೋದಯವು ಜಗತ್ತನ್ನು ಉದ್ಧರಿಸದೇ ಇರಲಾರದು.

ಇಂದು ಸರ್ವೋದಯದ ಗುರಿ ಸಾಧಿಸದೇ ಇರಲು ನಮ್ಮ ಸಾಧನ ಗಳಲ್ಲಿರುವ ದೋಷವೇ ಕಾರಣವಾಗಿದೆ. ಇಂದು ಯಾರಾದರೂ ರಾಜಕೀಯ ಆರ್ಥಿಕ ಸಾಮಾಜಿಕ ವೈಯಕ್ತಿಕ ಲಾಭದ ಆಸೆಯಿಂದ ಮಹತ್ವಾಕಾಂಕ್ಷೆ ಯಿಂದ ಸರ್ವೋದಯ ಚಳುವಳಿಯಲ್ಲಿ ಸೇರಿದರೆ ಅಂಥವರು ನಿಶ್ಚಿತವಾಗಿಯೂ ನಿರಾಶೆಯಿಂದ ಮರಳ ಬೇಕಾಗುತ್ತದೆ.

ಸರ್ವೋದಯ ಮಾರ್ಗವು ಆತ್ಮೋನ್ನತಿಯ ಮಾರ್ಗವಾಗಿದೆ. ಯಾರಿಗೆ "ಆತ್ಮವತ್ ಸರ್ವ ಭೂತಾ" ಭಾವನೆ ಇದೆಯೋ ಯಾರಿಗೆ ಸಕಲ ಪ್ರಾಣಿ ಗಳಲ್ಲಿಯೂ ದೇವರನ್ನು ದೇವರಲ್ಲಿ ಸಕಲ ಪ್ರಾಣಿಗಳನ್ನು ಕಾಣುವ ಹಂಬಲ ವಿದೆಯೋ ಅಂಥವರಿಂದ ಮಾತ್ರ ಸರ್ವೋದಯವು ಯಶಸ್ವಿಯಾಗುತ್ತದೆ.

ಇಂಥ ಜನರು ತಂಡ ತಂಡವಾಗಿ ಸರ್ವೋದಯದಲ್ಲಿ ಸೇರುವ ಕಾಲ ಇಂದಿಲ್ಲ ನಾಳೆ ಬರಬಹುದು. ಒಂದು ವೇಳೆ ಇಂಥ ಕಾಲ ಬರಲಿಕ್ಕಿಲ್ಲ. ಸರ್ವೋದಯ ಸಮಾಜ ನಿರ್ಮಾಣವು ಸಾಧ್ಯವಾಗಲಿಕ್ಕಿಲ್ಲ. ಅದೊಂದು ದೂರದ ಮಾನವತೆಗೆ ಎಟುಕದ ಆದರ್ಶವೆನಿಸಬಹುದು. ಆದರೂ ಮಾನವ ತೆಯು ಬಾಳಿ ಬದುಕಬೇಕಾದರೆ, ಮಾನವ ಜನಾಂಗದ ಸರ್ವನಾಶವು ತಪ್ಪ ಬೇಕಾದರೆ ಸರ್ವೋದಯದ ಆದರ್ಶವನ್ನೇ ಕಣ್ಣು ಮುಂದಿಟ್ಟುಕೊಂಡು ಇಂದು ನಾವು ಸಾಗಬೇಕಾಗಿದೆ. ಉಪನಿಷತ್ತುಗಳಲ್ಲಿ ಹೇಳಿದಂತೆ 'ನಾನ್ಯಃ ಪಂಥಾ ವಿದ್ಯತೆ ಅಯನಾಯ' ಎಂದು ನಿರ್ವಿವಾದವಾಗಿ ನಾವು ಇಂದು ಒಪ್ಪಿ ಕೊಳ್ಳಬೇಕಾಗಿದೆ. ಇಂದು ಮಾನವತೆಯ ಮುನ್ನಡೆಯೇ ಸರ್ವೋದಯ

ವಾಗಿದೆ. ಸರ್ವೋದಯವು ಅಯಶಸ್ವಿಯಾದರೆ ಮಾನವ ಕುಲವೇ ಅಯಶ ಸ್ವಿಯಾದಂತೆ. ಇದರಲ್ಲಿ ಯಾವದೇ ಒಂದು ಪಕ್ಷದ, ಒಂದು ದೇಶದ ಮಾನ ಮರ್ಯಾದೆಗಳ ಜಯಾಪಜಯಗಳ ಪ್ರಶ್ನೆ ಅಡಕವಾಗಿಲ್ಲ. ಸರ್ವೋದಯವು ಇಂದು ಇಡೀ ಮಾನವ ಜನಾಂಗದ ಪ್ರಶ್ನೆಯಾಗಿದೆ ಮಾನವತೆಯ ಪ್ರಶ್ನೆ ಯಾಗಿದೆ. ಮಾನವನ ವಿಕಾಸದ ಮುಂದಿನ ಹೆಜ್ಜೆಯೇ ಸರ್ವೋದಯ ಸಮಾಜದ ನಿರ್ಮಾಣವಾಗಿದೆ.

ಈ ಮಾತುಗಳನ್ನು ಮನದಂದು ನೋಡಿದಾಗ ಇಂದು ನಡೆದ ಸರ್ವೋದಯ ಚಳವಳಿಯ ಮಹತ್ವವು ತಿಳಿದು ಬರುತ್ತದೆ. ಆಗ ನಾವೆಲ್ಲರೂ ಅದರಲ್ಲಿ ಏಕೆ ಧುಮುಕಬೇಕೆಂಬುದೂ ಸ್ಪಷ್ಟವಾಗಿ ನಮಗೆ ತಿಳಿಯುತ್ತದೆ ಮತ್ತು 'ಜೈ ಜಗತ್' ಎಂಬ ಘೋಷಣೆ ಎಷ್ಟು ಅರ್ಥಪೂರ್ಣವಾಗಿದೆ ಎಂಬದೂ ಹೊಳೆಯುತ್ತದೆ.

ಕಾರ್ಯಕ್ಕಿಂತಲೂ ಮೊದಲು ತಿಳುವಳಿಕೆ ಹುಟ್ಟುವದು ಅವಶ್ಯ. ತಿಳುವಳಿಕೆಯನ್ನು ಹುಟ್ಟಿಸುವದಕ್ಕಾಗಿಯೇ ವಿನೋಬಾ ದೇಶದ ತುಂಬ ಸಂಚರಿಸುತ್ತಲಿದ್ದಾರೆ ಪಾದ ಯಾತ್ರೆ ಹೊರಟಿದ್ದಾರೆ.

ಈ ತಿಳುವಳಿಕೆಗಾಗಿಯೇ ಈ ಚಿಕ್ಕ ಹೊತ್ತಿಗೆಯು ಆವಶ್ಯಕತೆಯುಂಟಾಯಿತು.

ಬೆಳಕು ಮೂಡುವದು ಮುಖ್ಯ. ಬೆಳಕು ಮೂಡಿದ ಮೇಲೆ ದಾರಿ ನಡೆಯುವದು ತಾನಾಗಿಯೇ ಸಾಗುತ್ತದೆ.

ಜೈ ಜಗತ್



